KA / BG-GPO/2515/WPP-47/2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೫ | ಬೆಂಗಳೂರು, ಗುರುವಾರ, ಮೇ ೧೩, ೨೦೧೦ (ವೈಶಾಖ ೨೩, ಶಕ ವರ್ಷ ೧೯೩೨) | ಸಂಚಿಕೆ ೧೯ |
|---|---|---|

## ಭಾಗ–೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಸಹಾಯಕ ಕಾರ್ಯನಿರ್ವಾಹಕ ಇಂಜನೀಯರವರ ಕಛೇರಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಉಪ–ವಿಭಾಗ, ಹಿರೇಕೆರೂರ**

**ಅಧಿಸೂಚನೆ ಸಂಖ್ಯೆ:ಸಕಾನಿಇಂ ಲೋಇ/ ಮಾಹ/ 2009–10/ ದಿನಾಂಕ:**

2005ರ ಮಾಹಿತಿ ಹಕ್ಕು ಅಧಿನಿಯಮ (2005ರ ಕೇಂದ್ರ ಕಾಯ್ದೆ 22)ರ ಅಡಿಯಲ್ಲಿ ಸಹಾಯಕ ಕಾರ್ಯನಿರ್ವಾಹಕ ಇಂಜನೀಯರ, ಲೋಕೋಪಯೋಗಿ ಇಲಾಖೆ ಉಪ–ವಿಭಾಗ, ಹಿರೇಕೆರೂರ ಕಛೇರಿಯನ್ನು ಸಾರ್ವಜನಿಕ ಪ್ರಾಧಿಕಾರವೆಂದು ಪರಿಗಣಿಸಿ ಸದರೀ ಅಧಿನಿಯಮದ ಸೆಕ್ಷನ್–5(1)ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡಂತೆ ಅಧಿಕಾರಿಗಳನ್ನು "ಸಾರ್ವಜನಿಕ ಮಾಹಿತಿ ಅಧಿಕಾರಿ" ಮತ್ತು ಸೆಕ್ಷನ್–5(2) ರಡಿಯಲ್ಲಿ ಸಾರ್ವಜನಿಕ ಸಹಾಯಕ ಮಾಹಿತಿ ಅಧಿಕಾರಿ ಹಾಗೂ ಸೆಕ್ಷನ್–19(1)ರಡಿಯಲ್ಲಿ "ಮೇಲ್ಮನವಿ ಪ್ರಾಧಿಕಾರ" ಎಂದು ನೇಮಕ ಮಾಡಲಾಗಿದೆ.

| ಅ. ನಂ. | ಕಛೇರಿ ಮತ್ತು ಪೂರ್ಣ ವಿಳಾಸ | ಸಾರ್ವಜನಿಕ ಮಾಹಿತಿ ಅಧಿಕಾರಿ ಸೆಕ್ಷನ್ 5(1) | ಸಾರ್ವಜನಿಕ ಸಹಾಯಕ ಮಾಹಿತಿ ಅಧಿಕಾರಿ ಸೆಕ್ಷನ್ 5(2) | ಮೇಲ್ಮನವಿ ಪ್ರಾಧಿಕಾರ ಸೆಕ್ಷನ್ 19(1) |
|---|---|---|---|---|
| 1 | ಸಹಾಯಕ ಕಾರ್ಯನಿರ್ವಾಹಕ ಇಂಜನೀಯರ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಉಪ–ವಿಭಾಗ, ಹಿರೇಕೆರೂರ | ಸಹಾಯಕ ಕಾರ್ಯನಿರ್ವಾಹಕ ಇಂಜನೀಯರ, ಲೋಕೋಪಯೋಗಿ ಇಲಾಖೆ ಉಪ–ವಿಭಾಗ, ಹಿರೇಕೆರೂರ | ಸಹಾಯಕ ಇಂಜನೀಯರ, (ಸೇವೆಯಲ್ಲಿ ಹಿರಿಯರು) ಲೋಕೋಪಯೋಗಿ ಇಲಾಖೆ ಉಪ–ವಿಭಾಗ, ಹಿರೇಕೆರೂರ | ಕಾರ್ಯನಿರ್ವಾಹಕ ಇಂಜನೀಯರ, ಲೋಕೋಪಯೋಗಿ ಇಲಾಖೆ ವಿಭಾಗ, ಹಾವೇರಿ |

ಸಹಾಯಕ ಕಾರ್ಯನಿರ್ವಾಹಕ ಇಂಜನೀಯರ,
ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ, ಉಪ–ವಿಭಾಗ, ಹಿರೇಕೆರೂರ.

**ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2005 (ಭಾರತ ಸರ್ಕಾರ)**

**ಕರ್ನಾಟಕ ಸರ್ಕಾರ**

**ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಉಪ–ವಿಭಾಗ, ಹಿರೇಕೆರೂರ**

**ಕೈಪಿಡಿ–1**

**ಸಂಸ್ಥೆಯ ವಿವರಗಳು ಮತ್ತು ಕರ್ತವ್ಯ ಮತ್ತು ವಿಧಿಗಳು:**

ಕರ್ನಾಟಕ ರಾಜ್ಯದಲ್ಲಿನ ಹಾವೇರಿ ಜಿಲ್ಲೆಯ ಹಿರೇಕೆರೂರ ತಾಲೂಕಿನ ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ವ್ಯಾಪ್ತಿಯ ರಸ್ತೆಗಳ ನಿರ್ಮಾಣ ನಿರ್ವಹಣೆ ಮತ್ತು ದುರಸ್ತಿ ಕಾರ್ಯಗಳನ್ನು ಲೋಕೋಪಯೋಗಿ ಇಲಾಖೆಯ ವಸತಿ ಗೃಹಗಳು, ಸರ್ಕಾರಿ ಕಛೇರಿ ಕಟ್ಟಡಗಳ ನಿರ್ಮಾಣವನ್ನು ಸುಗಮವಾಗಿ ಹಾಗೂ ಸುವ್ಯವಸ್ಥಿತವಾಗಿ ನಿರ್ವಹಿಸುವ ದೃಷ್ಟಿಯಿಂದ 20–9–1994ರಿಂದ ಅಸ್ತಿತ್ವಕ್ಕೆ ಬಂದಿರುತ್ತದೆ. ಕಾರ್ಯನಿರ್ವಾಹಕ ಇಂಜನೀಯರರು, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ವಿಭಾಗ, ಹಾವೇರಿ, ಅಧೀಕ್ಷಕ ಇಂಜನೀಯರ, ಲೋಕೋಪಯೋಗಿ ವೃತ್ತ ಇಲಾಖೆ, ಧಾರವಾಡ ವೃತ್ತ, ಧಾರವಾಡ ಹಾಗೂ ಮುಖ್ಯ ಇಂಜನೀಯರ, ಸಂಪರ್ಕ ಮತ್ತು ಕಟ್ಟಡ (ಉತ್ತರ) ಧಾರವಾಡ ಇಲಾಖೆ, ಧಾರವಾಡ ಇವರ ಅಧೀನದಲ್ಲಿ ಕೆಲಸ ನಿರ್ವಹಿಸುತ್ತಿದೆ.

ಸಹಾಯಕ ಕಾರ್ಯನಿರ್ವಾಹಕ ಇಂಜನೀಯರ್ ಇವರು ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ಉಪ–ವಿಭಾಗ, ಹಿರೇಕೆರೂರ ಕಛೇರಿಯ ಮುಖ್ಯಸ್ಥರಾಗಿರುತ್ತಾರೆ. ಇವರ ಅಧೀನದಲ್ಲಿ 4 ಶಾಖೆಗಳು ಕಾರ್ಯನಿರ್ವಹಿಸುತ್ತವೆ.

1. ತಾಂತ್ರಿಕ ಶಾಖೆ
2. ಆಡಳಿತ ಶಾಖೆ
3. ಲೆಕ್ಕ ಶಾಖೆ
4. ಉಗ್ರಾಣ ಶಾಖೆ

**1. ತಾಂತ್ರಿಕ ಶಾಖೆ:–**

ಸಹಾಯಕ ಕಾರ್ಯನಿರ್ವಾಹಕ ಇಂಜನೀಯರವರು ಈ ಉಪ–ವಿಭಾಗ ಕಾರ್ಯಾಲಯದ ತಾಂತ್ರಿಕ ವಿಷಯಗಳಿಗೆ ಸಂಬಂಧಪಟ್ಟ ಎಲ್ಲಾ ಕಾರ್ಯಗಳ ಕಾರ್ಯಭಾರವನ್ನು ಹೊಂದಿದ್ದು, ಇವರಿಗೆ ಸಹಾಯಕ್ಕಾಗಿ ಸಹಾಯಕ ಇಂಜನೀಯರರು–04, ಕಿರಿಯ ಇಂಜನೀಯರರು–01 ಕಾರ್ಯನಿರ್ವಹಿಸುತ್ತಾರೆ.

1. ಉದ್ದೇಶಿಸಿರುವ ರಸ್ತೆ, ಸೇತುವೆ ಮತ್ತು ಕಟ್ಟಡ ಕಾಮಗಾರಿಗಳ ನಿರ್ಮಾಣ ಹಾಗೂ ನಿರ್ವಹಣೆ ಹಾಗೂ ಪರಿವೀಕ್ಷಣೆ ಹಾಗೂ ತಾಂತ್ರಿಕವಾಗಿ ಪರಿಶೀಲಿಸುವುದು.
2. ಅಂದಾಜು ಪಟ್ಟಿ ಹಾಗೂ ವಿನ್ಯಾಸಗಳನ್ನು ತಯಾರಿಸಿ ಆಡಳಿತಾತ್ಮಕ ಅನುಮೋದನೆಗಾಗಿ ಹಾಗೂ ತಾಂತ್ರಿಕ ಮಂಜೂರಾತಿಗಾಗಿ ವಿಭಾಗ ಕಛೇರಿಗೆ ಸಲ್ಲಿಸುವುದು.
3. ಯೋಜನೆಗಳ ಅನುಷ್ಠಾನದ ಪ್ರಗತಿ ಪತ್ರಿಕೆಗಳನ್ನು ತಯಾರಿಸಿ ವಿಭಾಗ ಕಛೇರಿಗೆ ಸಲ್ಲಿಸುವುದು.
4. ಎಂ.ಎಂ.ಆರ್ ಮತ್ತು ಕೆ.ಡಿ.ಪಿ ಸಭೆಗಳಿಗೆ ಪ್ರಗತಿ ವರದಿ ತಯಾರಿಸುವುದು ಮತ್ತು ಹಾಜರಾಗುವುದು.
5. ಕಾಮಗಾರಿಗಳ ಕಾರ್ಯಕ್ರಮ ಪಟ್ಟಿ ತಯಾರಿಸುವುದು ಹಾಗೂ ಅನುಮೋದನೆ ಪಡೆಯುವುದು.
6. ತಾಲೂಕ ಮಟ್ಟದ ಕೆ.ಡಿ.ಪಿ ಸಭೆಗೆ ಪ್ರಗತಿ ವರದಿ ತಯಾರಿಸುವುದು ಹಾಗೂ ಹಾಜರಾಗುವುದು.
7. ಯೋಜನೆಗಳ ನಿರ್ಮಾಣದ ಪಾವತಿಗಳನ್ನು ನಮೂದಿಸಿ ತಯಾರಿಸಿ ವಿಭಾಗ ಕಛೇರಿಗೆ ಸಲ್ಲಿಸುವುದು.

**2. ಆಡಳಿತ ಶಾಖೆ:–**

ಸಹಾಯಕ ಕಾರ್ಯನಿರ್ವಾಹಕ ಇಂಜನೀಯರ್, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಉಪ–ವಿಭಾಗ, ಹಿರೇಕೆರೂರ ಕಛೇರಿಯಲ್ಲಿ ಮಂಜೂರಾದ ಹುದ್ದೆಗಳು ಒಟ್ಟು 14 ಹಾಗೂ ಹೆಚ್ಚುವರಿ ಸೂಪರ್ ನ್ಯೂಮರಿ ಹುದ್ದೆಗಳು 3, ಒಟ್ಟು 17 ಹುದ್ದೆಗಳು ಇದ್ದು, ಇವುಗಳಲ್ಲಿ ಮಂಜೂರಾದ ಹುದ್ದೆಗಳಲ್ಲಿ 14 ಹಾಗೂ ಹೆಚ್ಚುವರಿ ಹುದ್ದೆಗಳು 3 ಒಟ್ಟು 17 ಜನ ಸಿಬ್ಬಂದಿಯವರು ಕಾರ್ಯನಿರ್ವಹಿಸುತ್ತಿದ್ದಾರೆ. ಈ ಸಂಖ್ಯೆಗಳ ಪೈಕಿ ಹಾಲಿ ಕಾರ್ಯನಿರ್ವಹಿಸುತ್ತಿರುವ ವರ್ಗ ಎ–1 ವರ್ಗ ಬಿ–4 ವರ್ಗ ಸಿ–4 ಮತ್ತು ವರ್ಗ ಡಿ–3 ಮಂಜೂರಾದ ಹುದ್ದೆಗಳಲ್ಲಿದ್ದರೆ, ಹೆಚ್ಚುವರಿ ಹಾಗೂ ಸೂಪರ್ ನ್ಯೂಮರಿ ಹುದ್ದೆಯಲ್ಲಿ ಗ್ರೂಪ್ ಡಿ–3 ಹುದ್ದೆಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ.

ಆಡಳಿತ ಶಾಖೆಯಲ್ಲಿ ಇಬ್ಬರು ದ್ವಿತೀಯ ದರ್ಜೆ ಸಹಾಯಕರು ಕಾರ್ಯನಿರ್ವಹಿಸುತ್ತಿದ್ದು, ಇವರಲ್ಲಿ ಒಬ್ಬರು ಆಡಳಿತಕ್ಕೆ ಸಂಬಂಧಪಟ್ಟಂತೆ ನೌಕರರ ಸೇವಾ ವಿವರಗಳು, ಸಿಬ್ಬಂದಿ ವೇತನ ಬಿಲ್ಲು, ವಿದ್ಯುಚ್ಛಕ್ತಿ ಮತ್ತು ದೂರವಾಣಿ ಬಿಲ್ಲು

ಹಾಗೂ ಸದರೀ ನೌಕರರ ರಜೆ ಇತ್ಯಾದಿಗಳ ನಿರ್ವಹಣೆ ಮತ್ತು ಸಿಬ್ಬಂದಿಗೆ ಸಂಬಂಧಪಟ್ಟ ನಿಯತಕಾಲಿಕಗಳನ್ನು ಸಲ್ಲಿಸುವ ಕಾರ್ಯಗಳನ್ನು ಸಹಾಯಕ ಕಾರ್ಯನಿರ್ವಾಹಕ ಇಂಜನೀಯರವರ ಆದೇಶಗಳ ಮೇರೆಗೆ ಕಾರ್ಯನಿರ್ವಹಿಸುತ್ತಾರೆ. ಈ ಆಡಳಿತ ಶಾಖೆಯಲ್ಲಿ ನಿರ್ವಹಿಸುವ ಸಂಕ್ಷಿಪ್ತ ಕೆಲಸಗಳ ವಿವರಗಳು ಈ ಕೆಳಕಂಡಂತೆ ನೀಡಲಾಗಿದೆ.

1. ಆಡಳಿತ ಶಾಖೆಯು ಆಡಳಿತಕ್ಕೆ ಸಂಬಂಧಪಟ್ಟಂತೆ ನೌಕರರ ಸೇವಾ ವಿವರಗಳ ಹಾಗೂ ಬಡ್ತಿಗಳ ಮತ್ತು ನಿವೃತ್ತಿ, ಪಿಂಚಣಿ, ರಜೆ ವಗೈರೆಗಳಿಗೆ ಸಂಬಂಧಿಸಿದಂತೆ ದಾಖಲೆಗಳನ್ನು ಸಲ್ಲಿಸುವುದು ಮತ್ತು ನಿರ್ವಹಿಸುವುದು.
2. ಸಿಬ್ಬಂದಿ ವರ್ಗದ ವೇತನ ಬಿಲ್ಲುಗಳನ್ನು ಹಾಗೂ ಸಾದಿಲ್ವಾರು ಬಿಲ್ಲುಗಳನ್ನು ಸಿದ್ದಪಡಿಸುವುದು ಮತ್ತು ಸಂಬಂಧಪಟ್ಟಂತೆ ಅನುದಾನ ವಗೈರೆಗಳನ್ನು ಬಿಲ್ಲುಗಳಿಗೆ ಸಕ್ಷಮ ಅಧಿಕಾರಿಯ ಅನುಮೋದನೆ ಪಡೆದ ನಂತರವೇ ನಗದೀಕರಣಕ್ಕೆ ಸಲ್ಲಿಸುವುದು.
3. ನೌಕರರ ವಾರ್ಷಿಕ ವರದಿಗಳಾದ ಆಸ್ತಿ ಮತ್ತು ಹೊಣೆಗಾರಿಕೆ ಪಟ್ಟಿ ಹಾಗೂ ಕಾರ್ಯನಿರ್ವಹಣಾ ವರದಿಗಳನ್ನು ನೌಕರರಿಂದ ಪಡೆದು ಮೇಲಾಧಿಕಾರಿಗಳ ಅವಗಾಹನೆಗೆ ಸಲ್ಲಿಸುವುದು.
4. ಆಡಳಿತಕ್ಕೆ ಸಂಬಂಧಿಸಿದಂತೆ ಉಪ–ವಿಭಾಗದ ಆಯವ್ಯಯ ಅಂದಾಜು ಪಟ್ಟಿಯ ವಿವರಗಳನ್ನು ಮೇಲಾಧಿಕಾರಿಗಳಿಗೆ ಸಲ್ಲಿಸಲು ಸಿದ್ದಪಡಿಸುವುದು.
5. ಆಡಳಿತ ಶಾಖೆಯ ಇನ್ನೊಬ್ಬ ದ್ವಿತೀಯ ದರ್ಜೆ ಸಹಾಯಕರು ಕಛೇರಿಗೆ ಬರುವ ಮತ್ತು ಕಛೇರಿಯಿಂದ ಹೋಗುವ ಪತ್ರಗಳ ಸ್ವೀಕೃತಿ ಮತ್ತು ರವಾನೆ ಕಾರ್ಯದೊಂದಿಗೆ ವಿಭಾಗ ಕಛೇರಿಯಿಂದ ನೀಡುವ ಅಳತೆ ಪುಸ್ತಕಗಳು, ನಾಮಾಂಕಿತ ಸಮುದಾಯ ಹಾಜರಾತಿ ಪಟ್ಟಿ ಇವುಗಳ ದಾಖಲೆಗಳ ನಿರ್ವಹಣೆ ಹಾಗೂ ಅಂಚೆ ಚೀಟಿಗಳ ದಾಸ್ತಾನು ನಿರ್ವಹಣೆ ನಿರ್ವಹಿಸುತ್ತಾರೆ. ಇದರೊಂದಿಗೆ ವಾರ್ಷಿಕ ತಪಾಸಣಾ ವರದಿಗಳಿಗೆ ಪಾಲನಾ ವರದಿಯನ್ನು ಕ್ರೂಢೀಕರಿಸಿ ಸಲ್ಲಿಸುವ ಕಾರ್ಯ ನಿರ್ವಹಿಸುತ್ತಾರೆ.

**3. ಲೆಕ್ಕ ಪತ್ರ ಶಾಖೆ:–**

ಈ ಶಾಖೆಯಲ್ಲಿ ಒಬ್ಬ ಪ್ರಥಮ ದರ್ಜೆ ಸಹಾಯಕರು ಕೆಲಸ ನಿರ್ವಹಿಸುತ್ತಾರೆ. ಉಪ–ವಿಭಾಗಕ್ಕೆ ಸಂಬಂಧಪಟ್ಟಂತೆ ಕಾಮಗಾರಿಗಳ ನಗದು ಪುಸ್ತಕಗಳ ನಿರ್ವಹಣೆ, ಬಾಕಿ ಬಿಲ್ಲುಗಳ ಪರಿಶೀಲನೆಯೊಂದಿಗೆ ವಿಭಾಗ ಕಛೇರಿಗೆ ಸಲ್ಲಿಸುವುದು ಹಣ ಭರವಸೆ ಪತ್ರ ಬೇಡಿಕೆ ಪತ್ರ ಸಲ್ಲಿಸುವುದು. ಇದಲ್ಲದೇ ಲೆಕ್ಕ ಪತ್ರ ಶಾಖೆಗೆ ಸಂಬಂಧಿಸಿದ ಎಲ್ಲ ಪತ್ರ ವ್ಯವಹಾರಗಳನ್ನು ನಿರ್ವಹಿಸುವುದು.

**4. ಉಗ್ರಾಣ ಶಾಖೆ:–**

ಈ ಇಲಾಖೆಯಲ್ಲಿ ಒಬ್ಬ ದ್ವಿತೀಯ ದರ್ಜೆ ಸಹಾಯಕರು ಕೆಲಸ ನಿರ್ವಹಿಸುತ್ತಿದ್ದಾರೆ. ದಾಸ್ತಾನು ಸಾಮಗ್ರಿಗಳ ಹಾಗೂ ಯಂತ್ರೋಪಕರಣ ಸಾಮಗ್ರಿಗಳ ಹಾಗೂ ಸ್ಥಿರ ಸಾಮಗ್ರಿಗಳ ಪತ್ರ ವ್ಯವಹಾರ ಹಾಗೂ ಅವಶ್ಯವಿದ್ದಲ್ಲಿ ವಿಭಾಗ ಕಛೇರಿಗೆ ಬೇಡಿಕೆ ಪತ್ರ ಸಲ್ಲಿಸುವುದು. ಕಛೇರಿಗೆ ಅವಶ್ಯವಿರುವ ಲೇಖನಿ ಸಾಮಗ್ರಿಗಳನ್ನು ಖರೀದಿಸುವುದು, ನಿರುಪಯುಕ್ತ ಸಾಮಗ್ರಿಗಳ ಬಗ್ಗೆ ಸರ್ವೆ ವರದಿಯನ್ನು ಸಲ್ಲಿಸುವುದು. ಉಗ್ರಾಣಕ್ಕೆ ಸಂಬಂಧಪಟ್ಟ ಲೆಕ್ಕ ಪತ್ರ ಮಾಹಿತಿಯನ್ನು ವಿಭಾಗಕಛೇರಿಗೆ ಸಲ್ಲಿಸುವುದು.

**ಕೈಪಿಡಿ–2**

**ಸಂಸ್ಥೆಯ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದ ಅಧಿಕಾರ ಮತ್ತು ವಿಧಿಗಳ ವಿವರ.**

ಸಹಾಯಕ ಕಾರ್ಯನಿರ್ವಾಹಕ ಇಂಜನೀಯರ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಉಪ–ವಿಭಾಗ, ಹಿರೇಕೆರೂರ ಇವರು ಉಪ–ವಿಭಾಗದ ಮುಖ್ಯಸ್ಥರಿದ್ದು, ಇವರು ಕಾರ್ಯನಿರ್ವಾಹಕ ಇಂಜನೀಯರ್, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ವಿಭಾಗ, ಹಾವೇರಿ ಇವರ ಅಧೀನದಲ್ಲಿ ಕೆಲಸ ನಿರ್ವಹಿಸುತ್ತಾರೆ.

ಸಹಾಯಕ ಕಾರ್ಯನಿರ್ವಾಹಕ ಇಂಜನೀಯರವರ ಕಾರ್ಯಭಾರ ಈ ಕೆಳಗಿನಂತಿರುತ್ತದೆ.

1. ಪ್ರತಿಯೊಂದು ಉಪ–ವಿಭಾಗದ ಮುಖ್ಯಸ್ಥರಾಗಿ ಸಹಾಯಕ ಕಾರ್ಯನಿರ್ವಾಹಕ ಇಂಜನೀಯರವರು ಇರುತ್ತಾರೆ. ಇವರು ಉಪ–ವಿಭಾಗದ ಕಾಮಗಾರಿಗಳ ಶೇ.100 ರಷ್ಟು ಪರಿಶೀಲನೆ ಮಾಡಬೇಕಾಗುತ್ತದೆ.
2. ಮೇಲಾಧಿಕಾರಿಗಳು ನೀಡಿರುವ ತಪಾಸಣೆಯ ಟಿಪ್ಪಣಿಗಳಿಗೆ ತ್ವರಿತವಾಗಿ ಅನುಸರಣಾ ವರದಿಯನ್ನು ನಿಯಮಾವಳಿಗಳಂತೆ ಸಲ್ಲಿಸುವುದು.
3. ಉಪ–ವಿಭಾಗದ ಸಿಬ್ಬಂದಿ, ಲೆಕ್ಕ ವಿಚಾರಗಳು ಮತ್ತು ತಾಂತ್ರಿಕ ವಿಚಾರಗಳು, ಉಗ್ರಾಣದ ಲೆಕ್ಕ ವಿಚಾರಗಳು ಈ ಎಲ್ಲವನ್ನು ನಿರ್ವಹಿಸುವಲ್ಲಿ ಅವರೇ ಜವಾಬ್ದಾರರಾಗಿರುತ್ತಾರೆ.

4. ಉಪ–ವಿಭಾಗದಲ್ಲಿ ಪ್ರಥಮ ದರ್ಜೆ ಸಹಾಯಕರು, ದ್ವಿತೀಯ ದರ್ಜೆ ಸಹಾಯಕರು, ಸಹಾಯಕ ಇಂಜನೀಯರ್. ಕಿರಿಯ ಇಂಜನೀಯರ್, ಬೆರಳಚ್ಚುಗಾರರು ಉಪ–ವಿಭಾಗದ ಕೆಲಸಗಳನ್ನು ಜವಾಬ್ದಾರಿಯುತರಾಗಿ ಸಹಾಯಕ ಕಾರ್ಯನಿರ್ವಾಹಕ ಇಂಜನೀಯರವರಿಗೆ ಕೆಲಸ ನಿರ್ವಹಿಸಲು ಸಹಾಯಕರಾಗಿರುತ್ತಾರೆ.
5. ಸಹಾಯಕ ಕಾರ್ಯನಿರ್ವಾಹಕ ಇಂಜನೀಯರರು, ಕಾರ್ಯನಿರ್ವಾಹಕ ಇಂಜನೀಯರವರಿಗೆ ಮಾಹಿತಿಯನ್ನು ನಿಗದಿತ ದಿನಾಂಕದೊಳಗೆ ಎಲ್ಲಾ ನಿಯತಕಾಲಿಕೆಗಳನ್ನು ನಿಯಮಾನುಸಾರ ಸಲ್ಲಿಸಲು ಕ್ರಮ ತೆಗೆದುಕೊಳ್ಳುವುದು.
6. ಕಾಮಗಾರಿಗಳ ಅಂದಾಜು ತಯಾರಿಕೆ, ಕರಡು ಟೆಂಡರ್ ಪತ್ರಗಳ ತಯಾರಿಕೆ, ಗುತ್ತಿಗೆದಾರರಿಗೆ ನಿವೇಶನ ಇತರೇ ಕಾಮಗಾರಿಗಳ ಮಾರ್ಕ್ ಔಟ್ ಮಾಡುವ ಬಗ್ಗೆ ಸಹಾಯಕ ಕಾರ್ಯನಿರ್ವಾಹಕ ಇಂಜನೀಯರವರು ಕ್ರಮ ತೆಗೆದುಕೊಳ್ಳಬೇಕಾಗುತ್ತದೆ.

ಸಹಾಯಕ ಇಂಜನೀಯರ್/ಕಿರಿಯ ಇಂಜನೀಯರ್‌ರವರುಗಳು ತಾಂತ್ರಿಕ ವಿಚಾರಗಳು, ಶಾಖಾ ಲೆಕ್ಕಗಳು, ಟಿ ಮತ್ತು ಪಿ ಲೆಕ್ಕಗಳು, ಎಂ.ಇ.ಎಸ್.ಲೆಕ್ಕಗಳು ಮತ್ತು ಇತರೇ ವಾಹನಗಳ ಲೆಕ್ಕಗಳನ್ನು ನಿರ್ವಹಿಸುವರು. ಇವರುಗಳು ಬಿಲ್ಲು ತಯಾರಿಕೆಗಳನ್ನು ನಿರ್ವಹಿಸುವುದು ಅಲ್ಲದೇ ಪುಸ್ತಕಗಳಲ್ಲಿ ಕಾಮಗಾರಿಗಳ ವಿವರಗಳನ್ನು ಮತ್ತು ಅಳತೆಗಳನ್ನು ನಮೂದಿಸಿ ಗುತ್ತಿಗೆದಾರರಿಗೆ ಬಿಲ್ಲು ಪಾವತಿಸುವಲ್ಲಿ ಸರ್ಕಾರವು ನಿಗದಿಪಡಿಸಿದ ಸಮಯದೊಳಗೆ ಪಾವತಿಯಾಗುವಂತೆ ಕ್ರಮ ತೆಗೆದುಕೊಳ್ಳುವುದು.

**ಕೈಪಿಡಿ–3**

**ನಿರ್ಣಯ ತೆಗೆದುಕೊಳ್ಳುವಲ್ಲಿ ಪಾಲಿಸಬೇಕಾದ ವಿಧಿ ವಿಧಾನಗಳು ಮತ್ತು ಪರಿವೀಕ್ಷಣೆ ಹಾಗೂ ಜವಾಬ್ದಾರಿ ವಿವರಗಳು**

**ಇಲಾಖೆಯು ಕಾಮಗಾರಿಗೆ ಸಂಬಂಧಪಟ್ಟ ಕಾರ್ಯನಿರ್ವಹಿಸುವಲ್ಲಿ**

ಲೋಕೋಪಯೋಗಿ ಇಲಾಖೆಯ ಸಂಹಿತೆ ಭಾಗ–1 ಮತ್ತು ಭಾಗ–2 ಕರ್ನಾಟಕ ಪಾರದರ್ಶಕ ನಿಯಮ

ಲೋಕೋಪಯೋಗಿ ಲೆಕ್ಕ ಸಂಹಿತೆ ಭಾಗ–1 ಮತ್ತು ಭಾಗ–2ನ್ನು ಅನುಸರಿಸಲಾಗುವುದು.

ಭೂ ಸ್ವಾಧೀನ ಕಾಯ್ದೆ

ಉಗ್ರಾಣ ಕೈಪಿಡಿ

ಮಧ್ಯಸ್ಥಿಕೆ ಕಾಯ್ದೆಗಳ್ನು ಅನುಸರಿಸಲಾಗುತ್ತಿದೆ.

ಆಡಳಿತವನ್ನು ನಿರ್ವಹಿಸಲು

ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು

ಕರ್ನಾಟಕ ಆರ್ಥಿಕ ಸಂಹಿತೆ

ಕರ್ನಾಟಕ ಖಜಾನಾ ಸಂಹಿತೆ

ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು

ಇವುಗಳನ್ನು ಅನುಸರಿಸಲಾಗುತ್ತಿದೆ.

ಈ ಇಲಾಖೆಯಲ್ಲಿ ನಿರ್ವಹಿಸಲ್ಪಡುವ ಎಲ್ಲ ಕಾಮಗಾರಿಗಳನ್ನು ಕರ್ನಾಟಕ ಪಾರದರ್ಶಕ ನಿಯಮದ ಅನುಸಾರ ಟೆಂಡರ್ ಕರೆದು ಗುತ್ತಿಗೆದಾರರಿಗೆ ನೀಡಲಾಗುತ್ತಿದೆ. ಗುತ್ತಿಗೆದಾರರನ್ನು ನಿಗದಿಪಡಿಸಿದ ನಂತರ ಅವರಿಗೆ ಕಾರ್ಯಾದೇಶ ನೀಡಲಾಗುತ್ತಿದೆ. ಸಹಾಯಕ ಕಾರ್ಯನಿರ್ವಾಹಕ ಇಂಜನೀಯರರು ಗುತ್ತಿಗೆದಾರರಿಗೆ ನಿವೇಶನವನ್ನು ಹಸ್ತಾಂತರಿಸಿ ಕೆಲಸವನ್ನು ಅನುಷ್ಠಾನಗೊಳಿಸಲು ಮಾರ್ಕ್ ಔಟ್ ನೀಡಿ ಕೆಲಸ ಚಾಲನೆ ಮಾಡುತ್ತಾರೆ. ಸಂಬಂಧಿಸಿದ ಸಹಾಯಕ/ಕಿರಿಯ ಇಂಜನೀಯರರು ದೈನಂದಿನ ನಿವೇಶನಕ್ಕೆ ಹೋಗಿ ಕೆಲಸ ಉಸ್ತುವಾರಿಯನ್ನು ನೋಡಿಕೊಳ್ಳುತ್ತಾರೆ. ಸಹಾಯಕ ಕಾರ್ಯನಿರ್ವಾಹಕ ಇಂಜನೀಯರವರು ಆಗಿಂದಾಗ್ಗೆ ನಿವೇಶನಕ್ಕೆ ಭೇಟಿ ನೀಡಿ ಕೆಲಸವನ್ನು ಪರಿವೀಕ್ಷಿಸುತ್ತಾರೆ. ಹಾಗೆಯೇ ಕಾರ್ಯನಿರ್ವಾಹಕ ಇಂಜನೀಯರರು, ಅಧೀಕ್ಷಕ ಇಂಜನೀಯರರು, ಮುಖ್ಯ ಇಂಜನೀಯರರು ನಿವೇಶನಕ್ಕೆ ಭೇಟಿ ನೀಡಿ ಸಲಹೆ ಸೂಚನೆಗಳನ್ನು ನೀಡುತ್ತಾರೆ. ಪ್ರಗತಿಯನ್ನು ಪರಿಶೀಲಿಸಲು ಕಾರ್ಯನಿರ್ವಾಹಕ ಇಂಜನೀಯರರು, ಅಧೀಕ್ಷಕ ಇಂಜನೀಯರರು ಮತ್ತು ಮುಖ್ಯ ಇಂಜನೀಯರರ ಮಟ್ಟದಲ್ಲಿ ಸಭೆ ನಡೆಸಲಾಗುತ್ತದೆ.

ಅಕೌಂಟ್ ಟೆಬಿಲಿಟಿ ಬಗ್ಗೆ ಮಹಾಲೇಖಾಪಾಲಕರು 2 ವರ್ಷಕ್ಕೊಮ್ಮೆ ಸಂಬಂಧಿತ ಉಪ–ವಿಭಾಗ ಕಛೇರಿಗಳ ಪರಿವೀಕ್ಷಣೆ ಮಾಡುತ್ತಾರೆ. ಅಲ್ಲದೇ ಮುಖ್ಯ ಇಂಜನೀಯರವರ ಕಛೇರಿ, ಅಧೀಕ್ಷಕ ಇಂಜನೀಯರವರ ಕಛೇರಿ, ಕಾರ್ಯನಿರ್ವಾಹಕ ಇಂಜನೀಯರವರ ಕಛೇರಿಯಿಂದಲೂ ಉಪ–ವಿಭಾಗಗಳ ತಪಾಸಣೆ ನಡೆಯುತ್ತದೆ. ಕಳಪೆ ಕಾಮಗಾರಿಯ ಬಗ್ಗೆ ಏನಾದರೂ ಅರ್ಜಿ ಬಂದಲ್ಲಿ ಮಾನ್ಯ ಲೋಕಾಯುಕ್ತರು ಕೂಡ ನಿವೇಶನವನ್ನು ಪರಿಶೀಲನೆ ಮಾಡಿ ಏನಾದರೂ ಕಳಪೆ ಕಾಮಾರಿ ಇದ್ದಲ್ಲಿ ಸೂಕ್ತ ಕ್ರಮಕ್ಕೆ ಶಿಫಾರಸ್ಸು ಮಾಡುತ್ತಾರೆ.

**ಕೈಪಿಡಿ–4**

**ಕರ್ತವ್ಯಗಳ ನಿರ್ವಹಣೆಯಲ್ಲಿ ಪಾಲಿಸಬೇಕಾದ ಸೂತ್ರಗಳು**

ಲೋಕೋಪಯೋಗಿ ಇಲಾಖೆ ಮತ್ತು ನೀರಾವರಿ ಇಲಾಖೆಯ ಅಧಿಕಾರಿಗಳ ಆರ್ಥಿಕ ಅಧಿಕಾರ ಪ್ರತ್ಯಾಯೋಜನೆ

ಸರ್ಕಾರಿ ಆದೇಶ ಸಂಖ್ಯೆ:ಪಿಡಬ್ಲ್ಯು–1/ಎಫ್‌ಸಿಆರ್ 93/ಬೆಂಗಳೂರು ದಿನಾಂಕ:–15–12–1994

ಸಾಮಾನ್ಯ ಆರ್ಥಿಕ ಅಧಿಕಾರ ಪ್ರತ್ಯಾಯೋಜನೆ

ಸರ್ಕಾರಿ ಆದೇಶ ಸಂಖ್ಯೆ:ಎಫ್‌ಡಿ–1/ಟಿಎಫ್‌ಪಿ 2001 ಬೆಂಗಳೂರು ದಿನಾಂಕ:–02–02–2001

ಲೋಕೋಪಯೋಗಿ ಇಲಾಖೆ ಸಂಹಿತೆ

ಲೋಕೋಪಯೋಗಿ ಇಲಾಖೆ ಆರ್ಥಿಕ ಸಂಹಿತೆ

**ಕೆಐಪಿಡಿ–5**

**ಇಲಾಖೆಯ ಅಧೀನದಲ್ಲಿರುವ ಮತ್ತು ಸಿಬ್ಬಂದಿ ಉಪಯೋಗಿಸುತ್ತಿರುವ ನಿಯಮಗಳು, ವಿನಿಮಯಗಳು, ಸೂಚನೆಗಳು, ದಾಖಲೆಗಳು ಕೈಪಿಡಿಗಳ ವಿವರ**

**ಕಚೇರಿ ಕೈಪಿಡಿ ನಿಯಮಗಳು, ವಿನಿಮಯಗಳು ಮತ್ತು ಸೂಚನೆಗಳು**

ಕರ್ನಾಟಕ ನಾಗರೀಕ ಸೇವಾ ನಿಯಮಗಳು

ಕರ್ನಾಟಕ ಸರಕಾರಿ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು ನಿಯಮಗಳು)

ಕರ್ನಾಟಕ ಆರ್ಥಿಕ ಸಂಹಿತೆ

ಲೋಕೋಪಯೋಗಿ ಇಲಾಖೆಯ ಸಂಹಿತೆ ಭಾಗ–1 ಮತ್ತು ಭಾಗ–2

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಆಧ್ಯಾದೇಶ 2000

ಲೋಕೋಪಯೋಗಿ ಲೆಕ್ಕ ಸಂಹಿತೆ ಭಾಗ–1 ಮತ್ತು ಭಾಗ–2ನ್ನು ಅನುಸರಿಸಲಾಗುವುದು.

ಭೂಸ್ವಾಧೀನ ಕಾಯ್ದೆ

ಉಗ್ರಾಣ ಕೈಪಿಡಿ

ಮಧ್ಯಸ್ಥಿಕೆ ಕಾಯ್ದೆ 1996

ಕರ್ನಾಟಕ ನೀರಾವರಿ ಕಾಯ್ದೆ 1965

ಸಾದಿಲ್ವಾರು ವೆಚ್ಚದ ಕೈಪಿಡಿ

ಕರ್ನಾಟಕ ಖಜಾನೆ ಸಂಹಿತೆ

ಚಾಲ್ತಿ ದರಪಟ್ಟಿ

ಬಜೆಟ್ ಕೈಪಿಡಿ

**ಕೈಪಿಡಿ–6**

**ಇಲಾಖೆಯ ಅಧೀನದಲ್ಲಿರುವ ವರ್ಗೀಕರಣದ ತಃಖ್ತೆ**

**ತಾಂತ್ರಿಕ ಶಾಖೆ:–**

1) ಕಾರ್ಯನಿರ್ವಾಹಕ ಇಂಜನೀಯರವರ, ಅಧೀಕ್ಷಕ ಇಂಜನೀಯರವರ ಮತ್ತು ಮುಖ್ಯ ಇಂಜನೀಯರವರ ಮಟ್ಟದಲ್ಲಿ ಮಂಜೂರಾದ ಅಂದಾಜು ಪತ್ರಿಕೆಗಳು ಮತ್ತು ಅದಕ್ಕೆ ಸಂಬಂಧಪಟ್ಟ ಕಡತಗಳು
2) ಪ್ರಗತಿಯ ವರದಿಗಳು
3) ಆಯವ್ಯಯಕ್ಕೆ ಸಂಬಂಧಪಟ್ಟ ಆಯವ್ಯಯ ಪ್ರಸ್ತಾವನೆ ಮತ್ತು ಆಯವ್ಯಯ ಪಟ್ಟಿ
4) ಭಾರಿ ಹಾಗೂ ಸಣ್ಣ ಅಂದಾಜುಗಳ ಮಂಜೂರಾತಿ ವಹಿ
5) ಪಿ.ಡಬ್ಲ್ಯೂಡಿ ವಶದಲ್ಲಿರುವ ಸೇತುವೆ ಮತ್ತು ಕಲ್ವರ್ಟ್‌ಗಳ ವಹಿ
6) ದರ ಸೂಚಕ
7) ಆಯವ್ಯಯ ಕಾಮಗಾರಿಗಳ ವಹಿ
8) ಮೇಲಾಧಿಕಾರಿಗಳಿಂದ ಮಂಜೂರಾದ ಅಂದಾಜುಗಳ ಪಟ್ಟಿ.

**ಪಿ.ಬಿಯಲ್ಲಿರುವ ರಿಜಿಸ್ಟರ್ ಮಾಹಿತಿ**

1) ತುಂಡು ಗುತ್ತಿಗೆ ಪತ್ರ ಅನುಮೋದನೆ ರಿಜಿಸ್ಟರ್
2) ಸೇತುವೆಗಳ ರಿಜಿಸ್ಟರ್

3) ಕಟ್ಟಡಗಳ ರಿಜಿಸ್ಟರ್
4) ಮೇಲಾಧಿಕಾರಿಗಳಿಂದ ಮಂಜೂರಾದ ಅಂದಾಜು ಪತ್ರಿಕೆಗಳ ರಿಜಿಸ್ಟರ್

ದಾಖಲೆಗಳು:– **ಆಡಳಿತ ಶಾಖೆ**

ಉಪ–ವಿಭಾಗ ಕಛೇರಿಯ ತಪಾಸಣೆಗೆ ಅಗತ್ಯವಿರುವ ವಹಿಗಳು ಮತ್ತು ದಾಖಲಾತಿಗಳ ಪಟ್ಟಿ

1) ಹಾಜರಾತಿ ವಹಿ
2) ಪತ್ರಾಂಕಿತವಲ್ಲದ ಅಧಿಕಾರಿಗಳ ಸಾಂದರ್ಭಿಕ ರಜೆ & ಸಾಂದರ್ಭಿಕ ರಜೆ ಕಡತ ಅರ್ಜಿಗಳೊಂದಿಗೆ
3) ಸಂಘಟನಾ ವಹಿ
4) ಮಂಜೂರಾದ ಕಾರ್ಯನಿರ್ವಹಿಸುತ್ತಿರುವ ಮತ್ತು ಖಾಲಿ ಹುದ್ದೆಗಳ ತಃಖ್ತೆ
5) ಕೆಲಸ ವಿತರಣಾ ತಃಖ್ತೆ
6) ವೇತನ ಬಡ್ತಿಯ ನಿಗಾ ವಹಿ
7) ವೇತನ ಬಡ್ತಿಯ ಮಂಜೂರಾತಿ ವಹಿ
8) ಇನ್‌ಕಂಬೆನ್ಸಿ ವಹಿ
9) ರಹಸ್ಯ ವರದಿಗಳ ವಹಿ
10) ಆಸ್ತಿ ಮತ್ತು ದಾಯಿತ್ವ ತಃಖ್ತೆ ವಹಿ
11) ಮಹಾಲೇಖಾಪಾಲರು ಮತ್ತು ಇತರರಿಗೆ ಕಳುಹಿಸಲಾದ ನಿವೃತ್ತಿ ವೇತನ ಪತ್ರಗಳ ನಿಗಾ ವಹಿ
12) ಸೇವಾ ಸಹಿ
13) ಇಲಾಖಾ ಪರೀಕ್ಷೆಗಳ ನಿಗಾ ವಹಿ
14) ಪರಿವೀಕ್ಷಣಾ ಟಿಪ್ಪಣಿ ಪುಸ್ತಕ
15) ಕಛೇರಿ ನೌಕರರ ಮನೆಗಳ ವಿಳಾಸ
16) ವಿಧಾನ ಸಭೆ/ಪರಿಷತ್ ಪ್ರಶ್ನೆಗಳ ವಹಿ
17) ವೈಯಕ್ತಿಕ ವಹಿ
18) ಪ್ರತಿ ಮಾಹೆಗಳ ಬಾಕಿ ಪಟ್ಟಿ
19) ಸ್ಟಾಂಪು ವಹಿ ಪರಿವೀಕ್ಷಣಾ ದಿನದಂದು ಬಾಕಿ ಇರುವ ಸ್ಟಾಂಪುಗಳ ಮತ್ತು ಸ್ಟಾಂಪುಗಳ ಬೆಲೆಯನ್ನು ತೋರಿಸುವ ತಃಖ್ತೆ
20) ಸಾಮಾನ್ಯ ಸ್ವೀಕೃತಿ ವಹಿ
21) ರವಾನೆ ವಹಿ
22) ಸ್ಥಳೀಯ ವಿತರಣಾ ರವಾನೆ
23) ಕಛೇರಿ ಆದೇಶ ಪುಸ್ತಕ
24) ಸಾಮಾನ್ಯ ನಗದು ಪುಸ್ತಕ
25) ವೇತನ ಬಟವಾಡೆ ವಹಿ
26) ಪ್ರಯಾಣ ಭತ್ಯೆ ಬಟವಡೆ ವಹಿ
27) ಸಾದಿಲ್ವಾರು ವೆಚ್ಚ ವಹಿ ವೋಚರ್‌ಗಳ ಸಂಹಿತೆ

**ಲೆಕ್ಕ ಪತ್ರ ಶಾಖೆ:–**

1) ನಗದು ಪುಸ್ತಕ
2) ಚೆಕ್ ಮೆಮೋ ಪುಸ್ತಕ
3) ಎಲ್.ಒ.ಸಿ ರಿಜಿಸ್ಟರ್
4) ರೆಮೆಟೆನ್ಸ್ ರಿಜಿಸ್ಟರ್
5) ಚೆಕ್ ರಿಸೀವ್ಡ್ ರಿಜಿಸ್ಟರ್
6) ಎಸ್.ಬಿ.ಆರ್ ರಿಜಿಸ್ಟರ್
7) ಖಾಲಿ ಅಳತೆ ಪುಸ್ತಕಗಳ ವಹಿ
8) ಎಂ.ಪಿ.ಡಬ್ಲ್ಯು ರಿಜಿಸ್ಟರ್

9) ಟಿ.ಇ.ಒ ರಿಜಿಸ್ಟರ್
10) ವರ್ಕ್ಸ್ ರಿಜಿಸ್ಟರ್
11) ನಮೂನೆ–81
12) ಅಳತೆ ಪುಸ್ತಕಗಳ ಅರ್ಧವಾರ್ಷಿಕ ನಿಯತಕಾಲಿಕೆ

**ಉಗ್ರಾಣ ಶಾಖೆ:–**

1) ದಾಸ್ತಾನು ಸ್ವೀಕೃತಿ ವಹಿ (PWA-4)
2) ದಾಸ್ತಾನು ವಿತರಣಾ ವಹಿ (PWA-4)
3) ದಾಸ್ತಾನು ಖರೀದಿ ಪುಸ್ತಕ
4) ಅರ್ಧವಾರ್ಷಿಕ ನಿಯತಕಾಲಿಕ ವಹಿ
5) ಖಾಲಿ ಸಾಮಗ್ರಿಗಳ (ಖಾಲಿ ಸಿಮೆಂಟ್ ಚೀಲ ಖಾಲಿ ಡಾಂಬರ್ ಬ್ಯಾರಲ್‌ಗಳ ವಹಿ
6) ಖಾಲಿ ಅಳತೆ ಪುಸ್ತಕಗಳ ವಹಿ
7) ಲೇಖನ ಸಾಮಗ್ರಿಗಳ ಸ್ವೀಕೃತಿ ಮತ್ತು ವಿತರಣಾ ವಹಿ.
8) ಕಛೇರಿ ಪೀಠೋಪಕರಣಗಳ ವಹಿ
9) ಉಪಕರಣ ಮತ್ತು ಸ್ಥಿರ ಯಂತ್ರಗಳ ಸ್ವೀಕೃತಿ ವಹಿ
10) ಉಪಕರಣ ಮತ್ತು ಸ್ಥಿರ ಯಂತ್ರಗಳ ವಿತರಣಾ ವಹಿ
11) ಸೆಪ್ಟೆಂಬರ್ ಅಂತ್ಯದ ಉಪಕರಣ ಮತ್ತು ಸ್ಥಿರ ಯಂತ್ರಗಳ ವಾರ್ಷಿಕ ನಿಯತಕಾಲಿಕೆ
12) ಅಳತೆ ಪುಸ್ತಕಗಳ ಅರ್ಧವಾರ್ಷಿಕ ನಿಯತಕಾಲಿಕ
ಬಿಡುಗಡೆಯಾದ ಸಾಮಗ್ರಿಗಳ ಲೆಕ್ಕದ ವಹಿ

**ಕೈಪಿಡಿ–7**

ಇಲಾಖೆಯಲ್ಲಿ ನೀತಿ ನಿಯಮಗಳನ್ನು ಅಥವಾ ಆಡಳಿತವನ್ನು ನಡೆಸುವಲ್ಲಿ ಪಡೆಯುವ ಸಲಹಾ ಪತ್ರಗಳ ಅಥವಾ ಸಾರ್ವಜನಿಕ ಸದಸ್ಯರುಗಳಿಂದ ಸಲಹೆ ಪಡೆಯುವ ಬಗ್ಗೆ ಇರುವ ವ್ಯವಸ್ಥೆ ಮತ್ತು ವಿವರ.

--------- ಏನೂ ಇರುವುದಿಲ್ಲ ---------

**ಕೈಪಿಡಿ–8**

ಇಲಾಖೆಯಲ್ಲಿ ನಿಗಮ/ಪರಿಷತ್ತು/ಸಮಿತಿ ಮತ್ತು ಇತರೆ ಸಂಸ್ಥೆಗಳ ವಿವರ ಮತ್ತು ಅದರ ಉದ್ದೇಶ ಮತ್ತು ಈ ಸಂಸ್ಥೆಗಳ ಸಭೆಗಳು ಮತ್ತು ಸಭೆಯ ನಡುವಳಿಗಳು ಸಾರ್ವಜನಿಕರಿಗೆ ಲಭ್ಯವಿರುವ ಬಗ್ಗೆ.

--------- ಏನೂ ಇರುವುದಿಲ್ಲ ---------

**ಕೈಪಿಡಿ–9**

**ಇಲಾಖೆಯ ಅಧಿಕಾರ ಮತ್ತು ಸಿಬ್ಬಂದಿ ವರ್ಗದ ನಿರ್ದೇಶಿಕೆ**

ಈ ಇಲಾಖೆಯಲ್ಲಿ ಸಹಾಯಕ ಕಾರ್ಯನಿರ್ವಾಹಕ ಇಂಜನೀಯರ್ ಹಾಗೂ ಕಿರಿಯ ಇಂಜನೀಯರ್ ಇವರ ಅಧಿಕಾರದ ಬಗ್ಗೆ ಕೈಪಿಡಿ–2 ರಲ್ಲಿ ಈಗಾಗಲೇ ತಿಳಿಸಲಾಗಿದೆ.

**ಸಿಬ್ಬಂದಿ ವರ್ಗದ ನಿರ್ದೇಶಿತ (ಸಂಘಟನಾ ನಕ್ಷೆ) ಈ ಕೆಳಗೆ ನೀಡಿದೆ.**

| ಅ. ನಂ. | ಹುದ್ದೆ | ಹೆಸರು |
|---|---|---|
| 1 | ಸಹಾಯಕ ಕಾರ್ಯನಿರ್ವಾಹಕ ಇಂಜನೀಯರ್–1 | ಶ್ರೀ ಎಂ.ಬಿ. ತುರಮರಿ |
| 2 | ಸಹಾಯಕ ಇಂಜನೀಯರ್–4 | 1) ಶ್ರೀ ಬಿ.ಎಸ್. ಪಾಟೀಲ್<br>2) ಖಾಲಿ<br>3) ಖಾಲಿ ಇರುತ್ತದೆ<br>4) ಖಾಲಿ |
| 3 | ಕಿರಿಯ ಇಂಜನೀಯರ್–2 | 1) ಶ್ರೀ ಮಂಜುನಾಥ ಶೇಪೂರ |
| | | ಖಾಲಿ |

| ಅ. ನಂ. | ಹುದ್ದೆ | ಹೆಸರು |
|---|---|---|
| 4 | ಪ್ರಥಮ ದರ್ಜೆ ಸಹಾಯಕರು–1 | ಖಾಲಿ |
| 5 | ಪ್ರಥಮ ದರ್ಜೆ ಭೂಮಾಪಕರು–1 | ಖಾಲಿ |
| 6 | ದ್ವಿತೀಯ ದರ್ಜೆ ಸಹಾಯಕರು–2 | ಶ್ರೀ ಖಾಜಾಮಿಯಾ<br>ಶ್ರೀ ಮಲ್ಲಿಕಸಾಬ್ ಜಮಖಂಡಿ |
| 7 | ಕಂಪ್ಯೂಟರ್ ಆಪರೇಟರ್ | ಖಾಲಿ |
| 8 | ವಾಹನ ಚಾಲಕ–1 | ಶ್ರೀ ಎಸ್.ಬಿ. ಕಲ್ಮಠ |
| 7 | ಜವಾನರು–2 | 1) ಶ್ರೀಮತಿ ವಿದ್ಯಾ ಗುರುಪಾದಯ್ಯ ಹರಗಣಿ<br>2) ಶ್ರೀ ದಾದಾಪೀರ. ಐ. ಮಾಗೋಡ |
| 8 | ಕಾವಲುಗಾರರು–1 | ಶ್ರೀ ಡಿ.ಐ. ತಳಕಲ್ |

**ಸೂಪರ್ ನ್ಯೂಮರಿ ಹುದ್ದೆಗಳು**

| | | |
|---|---|---|
| 1 | ಗ್ಯಾಂಗಮನ್–3 | ಶ್ರೀ ಧರ್ಮಪ್ಪ ಶಿ. ಮಾಕನೂರ<br>ಶ್ರೀ ನಾಗಪ್ಪ ಲ. ಸಣ್ಣಿಂಗಮ್ಮನವರ<br>ಶ್ರೀ ಮಂಜಪ್ಪ ಬ. ತಿಪ್ಪಣ್ಣನವರ |

**ಕೈಪಿಡಿ–10**

**ಇಲಾಖೆಯ ಅಧಿಕಾರಿಗಳ ಮತ್ತು ಸಿಬ್ಬಂದಿ ವರ್ಗದವರ ತಿಂಗಳ ವೇತನ/ ಪ್ರತಿಫಲ ಮತ್ತು ಅದನ್ನು ನೀಡುವ ಸೂತ್ರಗಳು:**

ಸಹಾಯಕ ಕಾರ್ಯನಿರ್ವಾಹಕ ಇಂಜನೀಯರರವರ ಕಛೇರಿಯಲ್ಲಿರುವ ಅಧಿಕಾರಿ ಮತ್ತು ಸಿಬ್ಬಂದಿಗಳ ವೇತನವನ್ನು ಕರ್ನಾಟಕ ಸರ್ಕಾರದ ಸಂಚಿತ ನಿಧಿಯಿಂದ ಪಾವತಿಸಲಾಗಿದೆ.

| ಅ. ನಂ. | ಹುದ್ದೆ | ಹೆಸರು | ವೇತನ ಶ್ರೇಣಿ | ಮೂಲ ವೇತನ |
|---|---|---|---|---|
| 1 | ಸಹಾಯಕ ಕಾರ್ಯನಿರ್ವಾಹಕ ಇಂಜನೀಯರ–1 | ಶ್ರೀ ಎಂ.ಬಿ. ತುರಮರಿ | 14050–25050 | 24450–00 |
| 2 | ಸಹಾಯಕ ಇಂಜನೀಯರ–4 | 1) ಶ್ರೀ ಬಿ.ಎಸ್. ಪಾಟೀಲ್<br>2) ಖಾಲಿ<br>3) ಖಾಲಿ<br>4) ಖಾಲಿ | 11400–21600<br>11400–21600<br>11400–21600<br>11400–21600 | 21075–00<br><br>-----<br>----- |
| 3 | ಕಿರಿಯ ಇಂಜನೀಯರ್–1 | 1) ಶ್ರೀ ಮಂಜುನಾಥ. ಶೇಪೂರ<br>2) ಖಾಲಿ | 8825–16000 | 9275–00 |
| 4 | ಪ್ರಥಮ ದರ್ಜೆ ಸಹಾಯಕರು–1 | ಖಾಲಿ | 7275–13350 | ----- |
| 5 | ಪ್ರಥಮ ದರ್ಜೆ ಭೂಮಾಪಕ–1 | ಖಾಲಿ | 7275–13350 | ----- |
| 6 | ದ್ವಿತೀಯ ದರ್ಜೆ ಸಹಾಯಕ–2 | 1) ಶ್ರೀ ಖಾಜಾಮಿಯಾ<br>2) ಶ್ರೀ ಮಲ್ಲಿಕಸಾಬ. ಜಮಖಂಡಿ | 5800–10500<br>5800–10500 | 5900–00<br>5800–00 |
| 7 | ಕಂಪ್ಯೂಟರ ಆಪರೇಟರ್–1 | ಖಾಲಿ | 5800–10500 | ----- |
| 8 | ಚಾಲಕ–1 | ಶ್ರೀ ಎಸ್.ಬಿ. ಕಲ್ಮಠ | 5800–10500 | 9750–00 |

| ಅ. ನಂ. | ಹುದ್ದೆ | ಹೆಸರು | ವೇತನ ಶ್ರೇಣಿ | ಮೂಲ ವೇತನ |
|---|---|---|---|---|
| 9 | ಜವಾನ–2 | ಶ್ರೀಮತಿ ವಿದ್ಯಾ.ಗು. ಹರಗಣಿ<br>ಶ್ರೀ ದಾದಾಪೀರ.ಐ. ಮಾಗೋಡ | 4800–7275<br>4800–7275 | 5000–00<br>5700–00 |
| 10 | ಕಾವಲುಗಾರ–1 | ಶ್ರೀ ದಾವಲಸಾ.ಐ. ತಳಕಲ್ಲ | 4800–7275 | 6250–00 |
| 11 | ಗ್ಯಾಂಗಮನ್–3 | 1)ಶ್ರೀ ನಾಗಪ್ಪ.ಟಿ. ಸಣ್ಣಿಂಗಮ್ಮನವರ<br>2) ಶ್ರೀ ಧರ್ಮಪ್ಪ.ಸಿ. ಮಾಕನೂರ<br>3) ಶ್ರೀ ಮಂಜಪ್ಪ.ಬಿ. ತಿಪ್ಪಣ್ಣನವರ | 4800–7275<br>4800–7275<br>4800–7275 | 6950–00<br>6950–00<br>6000–00 |

**ಕೈಪಿಡಿ–11**

**ಇಲಾಖೆಯಲ್ಲಿ ಸಹಾಯಧನ ನೀಡುವ ಕಾರ್ಯಕ್ರಮಗಳ ನಿರ್ವಹಣಾ ವಿವರ ಮತ್ತು ಅದಕ್ಕೆ ಒದಗಿಸಲಾದ ಅನುದಾನ ಮತ್ತು ಫಲಾನುಭವಿಗಳ ವಿವರಗಳು.**

ಸಹಾಯಧನ ನೀಡುವ ಕಾರ್ಯಕ್ರಮಗಳು ಇಲ್ಲ.

**ಕೈಪಿಡಿ–12**

**ಇಲಾಖೆಯಲ್ಲಿ ಸಾರ್ವಜನಿಕರಿಗೆ ಮಾಹಿತಿ ಪಡೆಯಲು ಲಭ್ಯವಿರುವ ಸವಲತ್ತುಗಳು ಹಾಗೂ ಗ್ರಂಥಾಲಯ ಅಥವಾ ವಾಚನಾಲಯಗಳು ಇದ್ದಲ್ಲಿ ಅದರ ವಿವರ.**

ಸಾರ್ವಜನಿಕರು ಸಹಾಯಕ ಕಾರ್ಯನಿರ್ವಾಹಕ ಇಂಜನೀಯರರು, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಉಪ–ವಿಭಾಗ, ಹಿರೇಕೆರೂರ ಇವರ ವ್ಯಾಪ್ತಿಯಲ್ಲಿ ಲಭ್ಯವಿರುವ ಸವಲತ್ತುಗಳನ್ನು ಪಡೆಯಲು ಶ್ರೀ ಗಂಗಾಧರ ಪಟೇಲ್ ಪ್ರ.ದ.ಸಹಾಯಕ ಇವರಿಗೆ ಅರ್ಜಿ ನೀಡುವುದು ಅಥವಾ ಸಂಪರ್ಕಿಸುವುದು.

ಕಛೇರಿಯ ಸಮಯದ ವೇಳೆಯಲ್ಲಿ ಮೇಲ್ಕಂಡ ಅಧಿಕಾರಿಗಳನ್ನು ಸಂಪರ್ಕಿಸಬೇಕಾದ ದೂರವಾಣಿ ಸಂಖ್ಯೆ:08376–282302 ಸಾರ್ವಜನಿಕರಿಗೆ ಬಳಕೆಗೆ ವಾಚನಾಲಯ ಲಭ್ಯವಿರುವುದಿಲ್ಲ.

**ಕೈಪಿಡಿ–13**

**ಇಲಾಖೆಯಲ್ಲಿರುವ ಸಾರ್ವಜನಿಕ ಮಾಹಿತಿ ಅಧಿಕಾರಿಗಳ ಹೆಸರು, ಪದನಾಮ ಮತ್ತು ವಿವರಗಳು, ಸಾರ್ವಜನಿಕ ಮಾಹಿತಿ ಅಧಿಕಾರಿಗಳ ಹೆಸರು ಪದನಾಮ**

ಸಾರ್ವಜನಿಕರು ಸಹಾಯಕ ಕಾರ್ಯನಿರ್ವಾಹಕ ಇಂಜನೀಯರರು, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಉಪ–ವಿಭಾಗ, ಹಿರೇಕೆರೂರ ಇವರ ವ್ಯಾಪ್ತಿಯಲ್ಲಿ ಲಭ್ಯವಿರುವ ಸವಲತ್ತುಗಳನ್ನು ಪಡೆಯಲು ಶ್ರೀ ಎಂ.ಬಿ. ತುರಮರಿ ಇವರಿಗೆ ಅರ್ಜಿ ನೀಡುವುದು ಅಥವಾ ಕಛೇರಿ ವೇಳೆಯಲ್ಲಿ ಸಂಪರ್ಕಿಸುವುದು.

| ಅ. ನಂ. | ಕಛೇರಿ ಮತ್ತು ಪೂರ್ಣ ವಿಳಾಸ | ಸಾರ್ವಜನಿಕ ಮಾಹಿತಿ ನೀಡುವ ಅಧಿಕಾರಿ ಸೆಕ್ಷನ್ 5(1) | ಸಾರ್ವಜನಿಕ ಮಾಹಿತಿ ನೀಡುವ ಅಧಿಕಾರಿ ಸೆಕ್ಷನ್ 5(2) | ಮೇಲ್ಮನವಿ ಪ್ರಾಧಿಕಾರ ಅಧಿಕಾರಿಗಳು ಸೆಕ್ಷನ್ 19(1) |
|---|---|---|---|---|
| 1 | ಸಹಾಯಕ ಕಾರ್ಯನಿರ್ವಾಹಕ ಇಂಜನೀಯರ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಉಪ–ವಿಭಾಗ, ಹಿರೇಕೆರೂರ | ಸಹಾಯಕ ಕಾರ್ಯನಿರ್ವಾಹಕ ಇಂಜನೀಯರ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಉಪ–ವಿಭಾಗ, ಹಿರೇಕೆರೂರ | ಸಹಾಯಕ ಇಂಜನೀಯರ, (ಸೇವೆಯಲ್ಲಿ ಹಿರಿಯರು) ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ಉಪ–ವಿಭಾಗ, ಹಿರೇಕೆರೂರ | ಕಾರ್ಯನಿರ್ವಾಹಕ ಇಂಜನೀಯರ, ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ವಿಭಾಗ, ಹಾವೇರಿ |

**ಕೈಪಿಡಿ–14**

**ಇತರೆ ವಿವರಗಳು**

ಏನೂ ಇರುವುದಿಲ್ಲ.

ಮಾಹಿತಿಯನ್ನು ನಿಯಮಗಳಡಿ ಪರಿಶೀಲಿಸಿ ವರದಿಯನ್ನು ತಯಾರಿಸಿ ಸಲ್ಲಿಸಲಾಗಿದೆ.

ಸಹಾಯಕ ಕಾರ್ಯನಿರ್ವಾಹಕ ಇಂಜನೀಯರ,
ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ, ಉಪ–ವಿಭಾಗ, ಹಿರೇಕೆರೂರ.

ಪಿ.ಆರ್.262

**ಅಧಿಕಾರಿಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಇವರ ನ್ಯಾಯಾಲಯದಲ್ಲಿ**

**ಉಪಸ್ಥಿತರು**

**ಕೆ.ಸಿ. ಹರಿದಾಸ್**

**ಅಧಿಕಾರಿಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,**

**ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.**

**ಡಿ.ಟಿ.ಸಿ.ಆರ್.ನಂ.81/2009–10, ದಿನಾಂಕ:3ನೇ ಫೆಬ್ರವರಿ, 2010**

| **ಫಿರ್ಯಾದುದಾರರು** | **ಆಪಾದಿತರು** |
|---|---|
| ಪೊಲೀಸ್ ಉಪ ನಿರೀಕ್ಷಕರು, ಲಕ್ಕವಳ್ಳಿ ಠಾಣೆ. | ವೇಲು ಯಾನೆ ಜಯಕುಮಾರ ಬಿನ್ ನಟರಾಜು ಮತ್ತು ಇತರರು. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:27.07.2007ರಂದು ಪೊಲೀಸ್ ಉಪ ನಿರೀಕ್ಷಕರು, ಲಕ್ಕವಳ್ಳಿ ಠಾಣೆ ಇವರು ಸಿಬ್ಬಂದಿ ಹಾಗೂ ಪಂಚರುಗಳೊಂದಿಗೆ ಅಕ್ರಮ ಸಾರಾಯಿ ಮತ್ತು ಸೇಂದಿ ಮಾರಾಟ ಮಾಡುವವರ ಪತ್ತೆ ಕಾರ್ಯದ ಮೇರೆಗೆ ಕರಕುಚ್ಚಿ, ಹುರುಳಿಬೋರೆ ಗ್ರಾಮಗಳಲ್ಲಿ ಗಸ್ತು ಮಾಡುತ್ತಾ, ಲಕ್ಕವಳ್ಳಿ ಹೋಬಳಿ ಹುರುಳಿಬೋರೆ ಗೊಂದಿ ಚಾನಲ್ ಹತ್ತಿರ ಹೋಗುತ್ತಿದ್ದಾಗ ಹುರುಳಿಬೋರೆ ಕಡೆಯಿಂದ ಒಂದು ಟಿ.ವಿ.ಎಸ್. ಬೈಕ್‌ನಲ್ಲಿ ಇಬ್ಬರು ಆಸಾಮಿಗಳು ಒಂದು ಬಿಳಿಯ ಪ್ಲಾಸ್ಟಿಕ್ ಕ್ಯಾನ್ ಇಟ್ಟುಕೊಂಡು ಬರುತ್ತಿದ್ದನ್ನು ನೋಡಿ, ತಡೆದು ನಿಲ್ಲಿಸಿ ತಪಾಸಣೆ ಮಾಡಲಾಗಿ, ಸೇಂದಿ ಇದ್ದುದು ಕಂಡುಬಂದಿದ್ದು, ಸಾಗಾಣಿಕೆಗೆ ಸಂಬಂಧಿಸಿದಂತೆ ರಹದಾರಿ ಪತ್ರಗಳನ್ನು ಕೇಳಲಾಗಿ, ಯಾವುದೇ ಅಧಿಕೃತ ರಹದಾರಿ ಪತ್ರ ಅಥವಾ ದಾಖಲಾತಿ ಪತ್ರಗಳನ್ನು ಹಾಜರುಪಡಿಸದೇ ಇದ್ದುದರಿಂದ ಅಕ್ರಮವಾದುದೆಂದು ದೃಢಪಡಿಸಿಕೊಂಡು, ಆಸಾಮಿಗಳ ಹೆಸರು ಮತ್ತು ವಿಳಾಸ ಕೇಳಲಾಗಿ ಚಾಲಕ ವೇಲು ಯಾನೆ ಜಯಕುಮಾರ ಬಿನ್ ನಟರಾಜು ಮತ್ತು ಇನ್ನೊಬ್ಬ ರಂಗ ಬಿನ್ ಕುಂಟ್ಟಸಿದ್ದಣ್ಣ, ಹುರುಳಿಬೋರೆ ಗ್ರಾಮ ಎಂದು ತಿಳಿಸಿದ್ದು, ಸ್ಥಳದಲ್ಲಿ ಪಂಚರ ಸಮಕ್ಷಮ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ, ದೊರೆತ ಸೇಂದಿ ಮತ್ತು ವಾಹನ ಸಂಖ್ಯೆ: ಕೆಎ–16–ಜೆ–5571 (ಟಿ.ವಿ.ಎಸ್. ಹೆವಿಡ್ಯೂಟಿ) ಅನ್ನು ಸರ್ಕಾರದ ವಶಕ್ಕೆ ಅಮಾನತ್ತುಪಡಿಸಿಕೊಂಡು ಆರೋಪಿಗಳನ್ನು ದಸ್ತಗಿರಿ ಮಾಡಿ ಪ್ರ.ಮಾ.ವ. ನಂ.46/2007ರಲ್ಲಿ ಪ್ರಕರಣವನ್ನು ದಾಖಲಿಸಿ ವಶಪಡಿಸಿಕೊಂಡ ವಾಹನವನ್ನು ಮುಂದಿನ ವಿಲೇವಾರಿ ಕುರಿತು ಈ ಪ್ರಾಧಿಕಾರದ ಅನುಮತಿ ಪಡೆದು ಅಬಕಾರಿ ನಿರೀಕ್ಷಕರು, ತರೀಕೆರೆ ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ.

ವಶಪಡಿಸಿಕೊಂಡ ವಾಹನಕ್ಕೆ ಸಂಬಂಧಿಸಿದಂತೆ ಈ ಪ್ರಾಧಿಕಾರವು ಮುಟ್ಟುಗೋಲಿನ ನಡವಳಿಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ಪ್ರಾರಂಭಿಸಿ, ವಾಹನದ ಮಾಲೀಕತ್ವದ ಹಾಗೂ ಮೌಲ್ಯದ ವಿವರಗಳನ್ನು ನೀಡುವಂತೆ ಕೋರಿ ಕ್ರಮವಾಗಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಚಿತ್ರದುರ್ಗ ಮತ್ತು ಚಿಕ್ಕಮಗಳೂರು ಇವರಿಗೆ ಪತ್ರ ಬರೆಯಲಾಗಿತ್ತು.

ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಚಿತ್ರದುರ್ಗ ಇವರಿಂದ ಪಡೆಯಲಾದ "ಬಿ" ವರದಿಯ ಪ್ರಕಾರ ಶ್ರೀ ಕೆ.ವಿ. ರುದ್ರಮುನಿ ಬಿನ್ ಬಿ. ವೀರಭದ್ರಯ್ಯ, ರಾಮ್‌ಗಿರಿ, ಹೊಳಲ್ಕೆರೆ, ತಾ: ಇವರು ವಾಹನದ ಮಾಲೀಕರೆಂದು ತಿಳಿದು ಬಂದಿದ್ದು, ವಾಹನದ ಮಾಲೀಕರಿಗೆ ನೊಂದಾಯಿತ ಅಂಚೆ ಮೂಲಕ ಪ್ರಕರಣದಲ್ಲಿ ಜಫ್ತುಪಡಿಸಿದ ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂದು ಕಾರಣ ಕೇಳಿ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ಅಡಿಯಲ್ಲಿ ನೋಟಿಸ್ ಜಾರಿ ಮಾಡಲು ಕ್ರಮ ಕೈಗೊಂಡಿದ್ದು, ನೋಟಿಸ್ ದಿನಾಂಕ:16.01.2010 ರಂದು ಜಾರಿಯಾದ ಬಗ್ಗೆ ಸ್ವೀಕೃತಿ ಈ ಪ್ರಾಧಿಕಾರಕ್ಕೆ ಮರಳಿ ಬಂದಿರುತ್ತದೆ.

ವಾಹನದ ಮಾಲೀಕರು ಈ ಪ್ರಾಧಿಕಾರದಿಂದ ನೀಡಲಾದ ಕಲಂ 43(ಬಿ) ನೋಟೀಸ್‌ನ್ನು ಸ್ವೀಕರಿಸಿಯೂ ಸಹ ಅದಕ್ಕೆ ಪೂರಕವಾಗಿ ಆಪಾದನೆಯನ್ನು ಅಲ್ಲಗಳೆಯಲು ಇದುವರೆವಿಗೂ ಯಾವುದೇ ದಾಖಲೆಗಳ ಅಥವಾ ಸಾಕ್ಷ್ಯಗಳ ಮೂಲಕ ಕೃತ್ಯದಲ್ಲಿ ಭಾಗಿಯಾಗಿಲ್ಲವೆಂದು, ತಾವಾಗಲೀ ಅಥವಾ ತಮ್ಮ ನ್ಯಾಯವಾದಿಗಳ ಮುಖಾಂತರವಾಗಲೀ ಹಾಜರಾಗದೇ ಇರುವುದರಿಂದ ಇವರು ಮೊಕದ್ದಮೆಯ ಕೃತ್ಯದಲ್ಲಿ ಶಾಮೀಲಾಗಿರುವುದು ಸ್ಪಷ್ಟವಾಗಿರುವುದು, ಈ ಕೃತ್ಯಕ್ಕೆ ಸೇಂದಿಯನ್ನು ಹಾಗೂ ವಾಹನವನ್ನು ಬಳಸಲಾಗಿಲ್ಲವೆಂಬ ಬಗ್ಗೆ ನಿರೂಪಿಸದೇ ಇರುವ ಅಂಶಗಳು, ಸಾಕ್ಷ್ಯಗಳು ಹಾಗೂ ಪ್ರಾಧಿಕಾರದ ಮುಂದೆ ಇರುವ ದಾಖಲೆಗಳ ಮೂಲಕ ಸಹಾಯಕ ಅಭಿಯೋಗ ನಿರ್ದೇಶಕರು, ಪ್ರಾಧಿಕಾರದ ಮುಂದೆ ವಾದ ಮಂಡಿಸಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವೆಂದು ಅಭಿಪ್ರಾಯಪಟ್ಟಿರುತ್ತಾರೆ.

ಲಭ್ಯವಿದ್ದ ದಾಖಲೆಗಳು ಹಾಗೂ ಆಧಾರಗಳನ್ನು ಗಮನಿಸಿದಾಗ ಸಹಾಯಕ ಅಭಿಯೋಗ ನಿರ್ದೇಶಕರ ವಾದವನ್ನು ಪುರಸ್ಕರಿಸಲು ಯೋಗ್ಯವೆಂದು ಪ್ರಾಧಿಕಾರಕ್ಕೆ ಮನವರಿಕೆಯಾಗುತ್ತದೆ. ಕಾರಣ, ವಾಹನದ ಮಾಲೀಕರು ಪ್ರಾಸಿಕ್ಯೂಷನ್ ಮಾಡಿರುವ ಆರೋಪಗಳನ್ನು ಅಲ್ಲಗಳೆಯಲು ಸಂಪೂರ್ಣ ನಿರ್ಲಕ್ಷ್ಯರಾಗಿರುವುದರಿಂದ ಹಾಗೂ ಕಲಂ 43ರ ಅಡಿಯಲ್ಲಿ, ಪ್ರಕರಣವನ್ನು ಪತ್ತೆಹಚ್ಚಿದ ಒಂದು ತಿಂಗಳೊಳಗಾಗಿ ವಶಪಡಿಸಿಕೊಂಡ ಸ್ವತ್ತುಗಳು ಕರ್ನಾಟಕ ಅಬಕಾರಿ ಕಾಯ್ದೆ, 1965ರ ಕಲಂ 43ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಬಾಧ್ಯವಾಗಿದ್ದಲ್ಲಿ, ಯಾರೊಬ್ಬರು ಸದರಿ ಸ್ವತ್ತುಗಳು ಕಾನೂನು ಬದ್ಧವಾಗಿವೆ ಎಂಬ ಸಾಕ್ಷ್ಯಾಧಾರಗಳನ್ನು ಹಾಜರುಪಡಿಸದೇ ಇದ್ದಲ್ಲಿ ಅಂತಹವುಗಳನ್ನು ಕಲಂ 43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿದ್ದು, ಮೊಕದ್ದಮೆಯ ಶೀಘ್ರ ವಿಲೇವಾರಿ ದೃಷ್ಟಿ ಹಾಗೂ ರಾಜಸ್ವದ ದೃಷ್ಟಿಯನ್ನು ಗಮನದಲ್ಲಿಟ್ಟುಕೊಂಡು ಈ ಮೊಕದ್ದಮೆಯನ್ನು ಕರ್ನಾಟಕ ಅಬಕಾರಿ ಕಾಯ್ದೆ, 1965ರ ಕಲಂ 43(ಸಿ) ಅಡಿಯಲ್ಲಿ ನಡವಳಿಗಳನ್ನು ಜರುಗಿಸಿ ಇತ್ಯರ್ಥಗೊಳಿಸುವುದು ಸಮಂಜಸವೆಂದು ಮನವರಿಕೆಯಾದ ಕಾರಣ ಈ ಕೆಳಕಂಡ ಆದೇಶ.

**ಆದೇಶ**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಕಲಂ 43(ಎ) ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಪೋಲೀಸ್ ಉಪ ನಿರೀಕ್ಷಕರು, ಲಕ್ಕವಳ್ಳಿ ಠಾಣೆ ಇವರ ಕ್ರೈಂ ನಂ.46/2007ರಲ್ಲಿ ದಿನಾಂಕ:27.07.2007ರಂದು ವಶಪಡಿಸಿಕೊಳ್ಳಲಾದ ವಾಹನ ಸಂಖ್ಯೆ:ಕೆಎ–16–ಜೆ–5571 (ಟಿ.ವಿ.ಎಸ್. ಹೆವಿಡ್ಯೂಟಿ) ಮೋಟಾರ್ ಬೈಕನ್ನು ಕರ್ನಾಟಕ ಅಬಕಾರಿ ಕಾಯ್ದೆ, 1965ರ ಕಲಂ 43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ.

(ಈ ಆದೇಶವನ್ನು ಇಂದು ಅಂದರೆ 3ನೇ ಫೆಬ್ರವರಿ 2010ರಂದು ಶೀಘ್ರಲಿಪಿಗಾರರಿಗೆ ಉಖ್ತಲೇಖನ ಕೊಟ್ಟು ಗಣಕ ಯಂತ್ರದಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

ಅಧಿಕಾರಯುತ ಅಧಿಕಾರಿ ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

ಪಿ.ಆರ್.325

**ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ನ್ಯಾಯಾಲಯ,**
**ಭದ್ರಾವತಿ ವಿಭಾಗ, ಭದ್ರಾವತಿ**

**ಸಂಖ್ಯೆ: ಎ3–ಎಫ್.ಓ.ಸಿ.ಸಿ.ಓ.ಎನ್–ಸಿಆರ್–4/2009–10, ದಿನಾಂಕ:24ನೇ ಮಾರ್ಚ್, 2010**

**ವಿಷಯ:** ಅಕ್ರಮ ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆ ಸಂಬಂಧ ಮಾರುತಿ ಓಮಿನಿ ವ್ಯಾನ್ ಸಂಖ್ಯೆ: ಕೆಎ–04–ಎನ್–2896 ನ್ನು ವಶಪಡಿಸಿಕೊಂಡ ಬಗ್ಗೆ.

**ಉಲ್ಲೇಖ:**1) ವಲಯ ಅರಣ್ಯಾಧಿಕಾರಿ, ತರೀಕೆರೆ ವಲಯ, ತರೀಕೆರೆ ರವರ ಪ್ರಥಮ ಮಾಹಿತಿ ವರದಿ ಸಂಖ್ಯೆ: 037096 ದಿನಾಂಕ:30.05.2009.

2) ವಲಯ ಅರಣ್ಯಾಧಿಕಾರಿ, ತರೀಕೆರೆ ವಲಯ, ತರೀಕೆರೆ ಇವರ ಪತ್ರ ಸಂಖ್ಯೆ: 140/2009–10 ದಿನಾಂಕ:01.06.2009.

3) ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಬೆಂಗಳೂರು ಇವರಿಗೆ ಬರೆದ ಪತ್ರದ ಸಮ ಸಂಖ್ಯೆ ದಿನಾಂಕ:15.06.2009.

4) ಅಧಿಕಾರಿಯುತ ಅಧಿಕಾರಿಗಳು, ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಭದ್ರಾವತಿ ವಿಭಾಗ, ಭದ್ರಾವತಿ ಇವರ ನ್ಯಾಯಾಲಯದ ಪ್ರಕಟಣೆ ಸಮ ಸಂಖ್ಯೆ ದಿನಾಂಕ:08.06.2009ನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ 02.07.2009 ರಂದು ಪ್ರಕಟಿಸಲಾಗಿದೆ.

**ಪ್ರಕಟಣೆಯ ಹಿನ್ನೆಲೆ:**

ದಿನಾಂಕ:30.05.2009ರಂದು ತರೀಕೆರೆ ವಲಯದ ಲಿಂಗದಹಳ್ಳಿ ಶಾಖೆಯ ವನಪಾಲಕರು ಹಾಗೂ ಸಿಬ್ಬಂದಿಯವರು ಲಿಂಗದಹಳ್ಳಿ ಗ್ರಾಮದ ಅರಣ್ಯ ತನಿಖಾ ಠಾಣೆಯ ಹತ್ತಿರ (ಹಿಂದಿನ) ತುರ್ತು ವರ್ತಮಾನದ ಮೇರೆಗೆ ಕಾಯುತ್ತಿರುವಾಗ ಉಡೇವಾ ಗ್ರಾಮದ ಕಡೆಯಿಂದ ಒಂದು ಮಾರುತಿ ಓಮಿನಿ ವ್ಯಾನ್ ಸಂಖ್ಯೆ: ಕೆಎ–04–ಎನ್–2896 ರಲ್ಲಿ ಬೀಟೆ ಜಾತಿಯ ಸೈಜುಗಳು 5=0.354 ಎಂ3 ನ್ನು ಅಕ್ರಮವಾಗಿ ಸಾಗಾಣಿಕೆ ಮಾಡುತ್ತಿದ್ದನ್ನು ಪತ್ತೆ ಹಚ್ಚಿ ವಾಹನವನ್ನು ಅಕ್ರಮವಾಗಿ ಸಾಗಾಣಿಕೆ ಮಾಡುತ್ತಿದ್ದು ಕಂಡುಬಂದಿರುತ್ತದೆ. ಸದರಿ ವಾಹನವನ್ನು ಹಾಗೂ ಅರಣ್ಯ ಉತ್ಪನ್ನವನ್ನು ವಶಪಡಿಸಿಕೊಂಡು ಸ್ಥಳದಲ್ಲಿ ಪಂಚನಾಮೆ ಜರುಗಿಸಿ ಅರಣ್ಯ ಮೊಕದ್ದಮೆ ಸಂಖ್ಯೆ:30/2009–10 ನ್ನು ದಾಖಲು ಮಾಡಿರುತ್ತಾರೆ. ಸದರಿ ವಾಹನವನ್ನು ಬಿಡುಗಡೆಗೆ ಕೋರಿ ಈ ಕಛೇರಿ ನ್ಯಾಯಾಲಯಕ್ಕೆ ಯಾರು ಅರ್ಜಿ ಸಲ್ಲಿಸಿರುವುದಿಲ್ಲ. ಈ ಬಗ್ಗೆ ಉಲ್ಲೇಖ ಪತ್ರ 3 ರಲ್ಲಿ ವಾಹನದ ಮಾಲೀಕರ ವಿಳಾಸ ಹಾಗೂ ವಾಹನದ ವಿವರವುಳ್ಳ 'ಬಿ' ವಹಿಯನ್ನು ಒಪ್ಪಿಸಲು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಬೆಂಗಳೂರು ಇವರಿಗೆ ಪತ್ರ ಬರೆದಿರುತ್ತದೆ. ವಿವರವನ್ನು ಒಪ್ಪಿಸಿರುವುದಿಲ್ಲ. ಸದರಿ ವಾಹನಕ್ಕೆ ಸಂಬಂಧಿಸಿದ ವಾರಸುದಾರರು ಯಾರು ಇಲ್ಲದೇ ಇದ್ದುದರಿಂದ ಕರ್ನಾಟಕ ಅರಣ್ಯ ಕಾಯಿದೆ 71(ಎ) ಪ್ರಕಾರ 30 ದಿನಗಳ ಕಾಲಾವಕಾಶ ನೀಡಿ ಯಾರಾದರೂ ವಾರಸುದಾರರು ಇದ್ದರೆ ವಾಹನಕ್ಕೆ ಸಂಬಂಧಿಸಿದ ದಾಖಲಾತಿಗಳ ಸಮೇತ ಹಕ್ಕುಬಾದ್ಯತೆಗಳನ್ನು ಈ ಕೆಳಗೆ ಸಹಿ ಮಾಡಿದವರ ಮುಂದೆ ಖುದ್ದಾಗಿಯಾಗಲೀ ಅಥವಾ ನ್ಯಾಯವಾದಿಗಳವರ ಮುಖಾಂತರವಾಗಲೀ ಹಾಜರುಪಡಿಸುವುದಕ್ಕೆ ಹಾಗೂ ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ ಸಂಬಂಧದಲ್ಲಿ ವಾಹನವನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ತಿಳುವಳಿಕೆ ಪತ್ರವನ್ನು ಕರ್ನಾಟಕ ರಾಜ್ಯ ಪತ್ರ ದಿನಾಂಕ:02.07.2009 ರಂದು ಪ್ರಚಾರ ಪಡಿಸಿ ಪ್ರಕಟಿಸಲಾಗಿದೆ.

ಪ್ರಕಟಣೆಯಂತೆ 30 ದಿನಗಳು ದಿನಾಂಕ:01.08.2009ಕ್ಕೆ ಮುಕ್ತಾಯಗೊಂಡಿದ್ದು, ವಾಹನದ ಬಗ್ಗೆ ಯಾವ ವಾರಸುದಾರರೂ ತಮ್ಮ ಮಾಲೀಕತ್ವವನ್ನು ದೃಢಪಡಿಸಿ ವಾಹನವನ್ನು ತಮ್ಮ ವಶಕ್ಕೆ ಕೋರಿಕೊಳ್ಳದೆ ಇದ್ದುದರಿಂದ ಸದರಿ ವಾಹನವನ್ನು ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆಯಲ್ಲಿ ಉಪಯೋಗಿಸಿರುವುದು ಸ್ಪಷ್ಟವಾಗಿರುತ್ತದೆ.

ಈ ಮೊಕದ್ದಮೆಯಲ್ಲಿ ಸಾಕಷ್ಟು ಕಾಲಾವಕಾಶವನ್ನು ಕೊಟ್ಟರೂ ಸಹ ಮಾಲೀಕರು ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಯವರು ಭದ್ರಾವತಿ ವಿಭಾಗ, ಭದ್ರಾವತಿ ಇವರ ನ್ಯಾಯಾಲಯದ ಮುಂದೆ ಬಂದು ವಾಹನದ ಮಾಲೀಕತ್ವದ ಬಗ್ಗೆ ಮೂಲ ದಾಖಲಾತಿಗಳನ್ನು ಹಾಜರುಪಡಿಸಿ, ತಾವು ತಪ್ಪಿತಸ್ತರಲ್ಲವೆಂಬುದನ್ನು ಸಾಬೀತು ಪಡಿಸಿರುವುದಿಲ್ಲವಾದ ಕಾರಣ ಮೇಲ್ಕಂಡ ವಾಹನವನ್ನು ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ಕೆಳಕಂಡಂತೆ ಆದೇಶ ಹೊರಡಿಸಿರುತ್ತೇನೆ.

**ಆದೇಶ**

ಮೇಲ್ಕಂಡ ವಿದ್ಯಾಮಾನಗಳನುಸಾರವಾಗಿ ಶ್ರೀ ಎಸ್.ಎಸ್. ಲಿಂಗರಾಜ, ಭಾ.ಆ.ಸೇ., ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಭದ್ರಾವತಿ ವಿಭಾಗ, ಭದ್ರಾವತಿ ಆದ ನಾನು ಅರಣ್ಯ ಕಾಯಿದೆ 1963 ನಿಯಮ 71ಎ(2)ರ ತಿದ್ದುಪಡಿ ಪ್ರಕಾರ ಒಂದು ಮಾರುತಿ ಓಮಿನಿ ವ್ಯಾನ್ ಸಂಖ್ಯೆ: ಕೆಎ–04–ಎನ್–2896 (ಛಾಸಿ ನಂ.916619, ಯಂತ್ರದ ಸಂಖ್ಯೆ:776076) ಹಾಗೂ ವಾಹನದಲ್ಲಿದ್ದ ಬೀಟೆ ಜಾತಿಯ ಸೈಜುಗಳು 5=0.354 ಎಂ3ನ್ನು ಸರ್ಕಾರದ ಪರ ಮುಟ್ಟುಗೋಲು ಮಾಡಿ ಆದೇಶಿಸಲಾಗಿದೆ.

ಈ ಆದೇಶವನ್ನು ದಿನಾಂಕ:24.03.2010 ರಂದು ಈ ನ್ಯಾಯಾಲಯದ ಮೊಹರು ಹಾಗೂ ನನ್ನ ಸಹಿಯೊಂದಿಗೆ ಹೊರಡಿಸಿರುತ್ತೇನೆ.

**ಎಸ್.ಎಸ್. ಲಿಂಗರಾಜ**
ಅಧಿಕಾರಿಯುತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಭದ್ರಾವತಿ ವಿಭಾಗ, ಭದ್ರಾವತಿ.

ಪಿ.ಆರ್.544

**ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ನ್ಯಾಯಾಲಯ, ಭದ್ರಾವತಿ ವಿಭಾಗ, ಭದ್ರಾವತಿ**

**ಸಂಖ್ಯೆ: ಎ3–ಎಫ್.ಓ.ಸಿ.ಸಿ.ಓ.ಎನ್–ಸಿಆರ್–10/2008–09, ದಿನಾಂಕ:24ನೇ ಮಾರ್ಚ್, 2010**

**ವಿಷಯ:** ಅಕ್ರಮ ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆ ಸಂಬಂಧ ಮೋಟಾರ್ ಬೈಕ್ ಸುಜುಕಿ ಮ್ಯಾಕ್ಸ್ ಸಂಖ್ಯೆ: ಕೆಎ–14–ಜೆ–3577 ನ್ನು ವಶಪಡಿಸಿಕೊಂಡ ಬಗ್ಗೆ.

**ಉಲ್ಲೇಖ:**1) ವಲಯ ಅರಣ್ಯಾಧಿಕಾರಿ, ಅರಣ್ಯ ಸಂಚಾರಿ ದಳ, ಚನ್ನಗಿರಿ ರವರ ಪ್ರಥಮ ಮಾಹಿತಿ ವರದಿ ಸಂಖ್ಯೆ:040161 ದಿನಾಂಕ:09.02.2009.

2) ವಲಯ ಅರಣ್ಯಾಧಿಕಾರಿ, ಉಂಬ್ಳೇಬೈಲು ವಲಯ, ಉಂಬ್ಳೇಬೈಲು ಇವರ ಪತ್ರ ಸಂಖ್ಯೆ:645/2008–09 ದಿನಾಂಕ:09.02.2009.

3) ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಶಿವಮೊಗ್ಗ ಇವರಿಗೆ ಬರೆದ ಪತ್ರದ ಸಮ ಸಂಖ್ಯೆ ದಿನಾಂಕ:16.02.2009.

4) ಅಧಿಕಾರಿಯುತ ಅಧಿಕಾರಿಗಳು, ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಭದ್ರಾವತಿ ವಿಭಾಗ, ಭದ್ರಾವತಿ ಇವರ ನ್ಯಾಯಾಲಯದ ಪ್ರಕಟಣೆ ಸಮ ಸಂಖ್ಯೆ ದಿನಾಂಕ:16.02.2009ನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ 18.06.2009 ರಂದು ಪ್ರಕಟಿಸಲಾಗಿದೆ.

**ಪ್ರಕಟಣೆಯ ಹಿನ್ನೆಲೆ:**

ದಿನಾಂಕ:09.02.2009ರಂದು ಉಂಬ್ಳೇಬೈಲು ವಲಯದ ಹಾಲ್‌ಲಕ್ಕವಳ್ಳಿ ಶಾಖೆಯ ವನಪಾಲಕರು ಹಾಗೂ ಸಿಬ್ಬಂದಿಯವರು ವರ್ಗದವರು ಇಲಾಖಾ ಜೀಪಿನಲ್ಲಿ ಗಸ್ತು ಕಾರ್ಯವನ್ನು ನಿರ್ವಹಿಸುತ್ತಿದ್ದಾಗ ಕಡೇಕಲ್ ಹಾಲ್‌ಲಕ್ಕವಳ್ಳಿ ಟಾರ್ ರಸ್ತೆಯಲ್ಲಿ ಮೋಟಾರ್ ಬೈಕ್ ಸುಜುಕಿ ಮ್ಯಾಕ್ಸ್ 100ಆರ್. ಸಂಖ್ಯೆ:ಕೆಎ–14–ಜೆ–3577 ರಲ್ಲಿ ಬೀಟೆ ತುಂಡುಗಳು 1=0.135 ಎಂ3 ಹಾಗೂ ಕೊಯ್ತ ಮಾಡಲು ಉಪಯೋಗಿಸಿದ ಒಂದು ಗರಗಸವನ್ನು ಅಕ್ರಮವಾಗಿ ಸಾಗಾಣಿಕೆ ಮಾಡುತ್ತಿದ್ದನ್ನು ಅಪರಾಧಿಯ ಸಮೇತ ಪತ್ತೆ ಹಚ್ಚಿ ವಶಪಡಿಸಿಕೊಂಡು ಸ್ಥಳದಲ್ಲಿ ಪಂಚನಾಮೆ ಜರುಗಿಸಿ ಅರಣ್ಯ ಮೊಕದ್ದಮೆ ಸಂಖ್ಯೆ:78/2008–09ನ್ನು ದಾಖಲು ಮಾಡಿರುತ್ತಾರೆ. ಸದರಿ ವಾಹನವನ್ನು ಬಿಡುಗಡೆಗೆ ಕೋರಿ ಈ ಕಛೇರಿ ನ್ಯಾಯಾಲಯಕ್ಕೆ ಯಾರು ಅರ್ಜಿ ಸಲ್ಲಿಸಿರುವುದಿಲ್ಲ. ಈ ಬಗ್ಗೆ ಉಲ್ಲೇಖ ಪತ್ರ 3ರಲ್ಲಿ ವಾಹನದ ಮಾಲೀಕರ ವಿಳಾಸ ಹಾಗೂ ವಾಹನದ ವಿವರವುಳ್ಳ 'ಬಿ' ವಹಿಯನ್ನು ಒಪ್ಪಿಸಲು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಶಿವಮೊಗ್ಗ ಇವರಿಗೆ ಪತ್ರ ಬರೆದಿರುತ್ತದೆ. ವಿವರವನ್ನು ಒಪ್ಪಿಸಿರುವುದಿಲ್ಲ. ಸದರಿ ವಾಹನಕ್ಕೆ ಸಂಬಂಧಿಸಿದ ವಾರಸುದಾರರು ಯಾರು ಇಲ್ಲದೇ ಇದ್ದುದರಿಂದ ಕರ್ನಾಟಕ ಅರಣ್ಯ ಕಾಯಿದೆ 71(ಎ) ಪ್ರಕಾರ 30 ದಿನಗಳ ಕಾಲಾವಕಾಶ ನೀಡಿ ಯಾರಾದರೂ ವಾರಸುದಾರರು ಇದ್ದರೆ ವಾಹನಕ್ಕೆ ಸಂಬಂಧಿಸಿದ ದಾಖಲಾತಿಗಳ ಸಮೇತ ಹಕ್ಕುಬಾದ್ಯತೆಗಳನ್ನು ಈ ಕೆಳಗೆ ಸಹಿ ಮಾಡಿದವರ ಮುಂದೆ ಖುದ್ದಾಗಿಯಾಗಲೀ ಅಥವಾ ನ್ಯಾಯವಾದಿಗಳವರ ಮುಖಾಂತರವಾಗಲೀ ಹಾಜರುಪಡಿಸುವುದಕ್ಕೆ ಹಾಗೂ ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ ಸಂಬಂಧದಲ್ಲಿ ವಾಹನವನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ತಿಳುವಳಿಕೆ ಪತ್ರವನ್ನು ಕರ್ನಾಟಕ ರಾಜ್ಯ ಪತ್ರ ದಿನಾಂಕ:18.06.2009 ರಂದು ಪ್ರಚಾರ ಪಡಿಸಿ ಪ್ರಕಟಿಸಲಾಗಿದೆ.

ಪ್ರಕಟಣೆಯಂತೆ 30 ದಿನಗಳು ದಿನಾಂಕ:17.07.2009ಕ್ಕೆ ಮುಕ್ತಾಯಗೊಂಡಿದ್ದು, ವಾಹನದ ಬಗ್ಗೆ ಯಾವ ವಾರಸುದಾರರೂ ತಮ್ಮ ಮಾಲೀಕತ್ವವನ್ನು ದೃಢಪಡಿಸಿ ವಾಹನವನ್ನು ತಮ್ಮ ವಶಕ್ಕೆ ಕೋರಿಕೊಳ್ಳದೆ ಇದ್ದುದರಿಂದ ಸದರಿ ವಾಹನವನ್ನು ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆಯಲ್ಲಿ ಉಪಯೋಗಿಸಿರುವುದು ಸ್ಪಷ್ಟವಾಗಿರುತ್ತದೆ.

ಈ ಮೊಕದ್ದಮೆಯಲ್ಲಿ ಸಾಕಷ್ಟು ಕಾಲಾವಕಾಶವನ್ನು ಕೊಟ್ಟರೂ ಸಹ ಮಾಲೀಕರು ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಯವರು ಭದ್ರಾವತಿ ವಿಭಾಗ, ಭದ್ರಾವತಿ ಇವರ ನ್ಯಾಯಾಲಯದ ಮುಂದೆ ಬಂದು ವಾಹನದ ಮಾಲೀಕತ್ವದ ಬಗ್ಗೆ ಮೂಲ ದಾಖಲಾತಿಗಳನ್ನು ಹಾಜರುಪಡಿಸಿ, ತಾವು ತಪ್ಪಿತಸ್ತರಲ್ಲವೆಂಬುದನ್ನು ಸಾಬೀತು ಪಡಿಸಿರುವುದಿಲ್ಲವಾದ ಕಾರಣ ಮೇಲ್ಕಂಡ ವಾಹನವನ್ನು ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ಕೆಳಕಂಡಂತೆ ಆದೇಶ ಹೊರಡಿಸಿರುತ್ತೇನೆ.

**ಆದೇಶ**

ಮೇಲ್ಕಂಡ ವಿದ್ಯಾಮಾನಗಳನುಸಾರವಾಗಿ ಶ್ರೀ ಎಸ್.ಎಸ್. ಲಿಂಗರಾಜ, ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಭದ್ರಾವತಿ ವಿಭಾಗ, ಭದ್ರಾವತಿ ಆದ ನಾನು ಅರಣ್ಯ ಕಾಯಿದೆ 1963 ನಿಯಮ 71ಎ(2)ರ ತಿದ್ದುಪಡಿ ಪ್ರಕಾರ ಮೋಟಾರ್ ಬೈಕ್ ಸುಜುಕಿ ಮ್ಯಾಕ್ಸ್ 100ಆರ್. ಸಂಖ್ಯೆ:ಕೆಎ–14–ಜೆ–3577 (ಛಾಸಿ ನಂ.1610F703013, ಯಂತ್ರದ ಸಂಖ್ಯೆ:1610M748233) ಹಾಗೂ ಬೀಟೆ ತುಂಡು 1=0.135 ಎಂ3 ಹಾಗೂ ಕೊಯ್ತು ಮಾಡಲು ಉಪಯೋಗಿಸಿದ ಒಂದು ಗರಗಸವನ್ನು ಸರ್ಕಾರದ ಪರ ಮುಟ್ಟುಗೋಲು ಮಾಡಿ ಆದೇಶಿಸಲಾಗಿದೆ.

ಈ ಆದೇಶವನ್ನು ದಿನಾಂಕ:24.03.2010 ರಂದು ಈ ನ್ಯಾಯಾಲಯದ ಮೊಹರು ಹಾಗೂ ಸಹಿಯೊಂದಿಗೆ ಹೊರಡಿಸಿರುತ್ತೇನೆ.

**ಎಸ್.ಎಸ್. ಲಿಂಗರಾಜ**
ಅಧಿಕಾರಿಯುತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಭದ್ರಾವತಿ ವಿಭಾಗ, ಭದ್ರಾವತಿ.

ಪಿ.ಆರ್.545

## ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ನ್ಯಾಯಾಲಯ, ಭದ್ರಾವತಿ ವಿಭಾಗ, ಭದ್ರಾವತಿ

**ಸಂಖ್ಯೆ: ಎ3–ಎಫ್.ಓ.ಸಿ.ಸಿ.ಓ.ಎನ್–ಸಿಆರ್–12/2008–09, ದಿನಾಂಕ:24/27ನೇ ಮಾರ್ಚ್, 2010**

**ವಿಷಯ:** ಅಕ್ರಮ ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆ ಸಂಬಂಧ ಮಾರುತಿ ಓಮಿನಿ ವ್ಯಾನ್ ಸಂಖ್ಯೆ: ಜಿಎ–02–ಸಿ–5770 ನ್ನು ವಶಪಡಿಸಿಕೊಂಡ ಬಗ್ಗೆ.

**ಉಲ್ಲೇಖ:**1) ವಲಯ ಅರಣ್ಯಾಧಿಕಾರಿ, ಚನ್ನಗಿರಿ ವಲಯ, ಚನ್ನಗಿರಿ ರವರ ಪ್ರಥಮ ಮಾಹಿತಿ ವರದಿ ಸಂಖ್ಯೆ: 039769 ದಿನಾಂಕ:02.02.2009.

2) ವಲಯ ಅರಣ್ಯಾಧಿಕಾರಿ, ಚನ್ನಗಿರಿ ವಲಯ, ಚನ್ನಗಿರಿ ಇವರ ಪತ್ರ ಸಂಖ್ಯೆ: 1957/2008–09 ದಿನಾಂಕ:05.02.2009.

3) ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಬೆಂಗಳೂರು ಇವರಿಗೆ ಬರೆದ ಪತ್ರದ ಸಮ ಸಂಖ್ಯೆ ದಿನಾಂಕ:25.02.2009.

4) ಅಧಿಕಾರಿಯುತ ಅಧಿಕಾರಿಗಳು, ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಭದ್ರಾವತಿ ವಿಭಾಗ, ಭದ್ರಾವತಿ ಇವರ ನ್ಯಾಯಾಲಯದ ಪ್ರಕಟಣೆ ಸಮ ಸಂಖ್ಯೆ ದಿನಾಂಕ:25.02.2009ನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ 18.06.2009 ರಂದು ಪ್ರಕಟಿಸಲಾಗಿದೆ.

**ಪ್ರಕಟಣೆಯ ಹಿನ್ನೆಲೆ:**

ದಿನಾಂಕ:02.02.2009ರಂದು ಚನ್ನಗಿರಿ ವಲಯದ ಕೂಡ್ಲಿಗೆರೆ ಶಾಖೆಯ ವನಪಾಲಕರು ಹಾಗೂ ಸಿಬ್ಬಂದಿಯವರು ವರ್ಗದವರು ಖಚಿತ ವರ್ತಮಾನದ ಮೇರೆಗೆ ಅತ್ತಿಗುಂದ ಗಸ್ತಿನ ಬೆಳ್ಳಿಗೆರೆಯಿಂದ ಅತ್ತಿಗುಂದಕ್ಕೆ ಬರುವ ಪಿಡಬ್ಲ್ಯೂ ರಸ್ತೆಯ ದೊಡ್ಡ ಆಲದ ಮರದ ಸಮೀಪ ಕಾದು ಕುಳಿತಿರುವಾಗ ಒಂದು ನೀಲಿ ಬಣ್ಣದ ಮಾರುತಿ ಓಮಿನಿ ವ್ಯಾನ್ ಬರುತ್ತಿರುವುದನ್ನು ನಿಲ್ಲಿಸಲು ಸೂಚಿಸಿದಾಗ ವಾಹನವನ್ನು ನಿಲ್ಲಿಸದೇ ವೇಗವಾಗಿ ತಪ್ಪಿಸಿಕೊಳ್ಳಲು ಪ್ರಯತ್ನಿಸಿದಾಗ ಇಲಾಖಾ ಜೀಪಿನಿಂದ ವಾಹನವನ್ನು ಬೆನ್ನಟ್ಟಿ ಹಿಡಿಯಲು ಪ್ರಯತ್ನಿಸಿದಾಗ ವಾಹನದಲ್ಲಿದ್ದ ಆಸಾಮಿಗಳು ವಾಹನದಿಂದ ಜಿಗಿದು ಪರಾರಿಯಾಗಿರುತ್ತಾರೆ. ವಾಹನವು ರಸ್ತೆಯ ಪಕ್ಕದಲ್ಲಿರುವ ಚರಂಡಿಯಲ್ಲಿ ಬಿದ್ದಿರುತ್ತದೆ. ನಂತರದ ವಾಹನವನ್ನು ಪರಿಶೀಲಿಸಿದಾಗ ವಾಹನವು ಮಾರುತಿ ವ್ಯಾನ್ ಸಂಖ್ಯೆ: ಜಿಎ–02–ಸಿ–5770 ಹಾಗೂ ವಾಹನದಲ್ಲಿದ್ದ ಬೀಟೆ ತುಂಡುಗಳು 8=0.692 ಎಂ3 ಅಕ್ರಮವಾಗಿ ಸಾಗಾಣಿಕೆ ಮಾಡುತ್ತಿದ್ದು ಕಂಡುಬಂದಿರುತ್ತದೆ. ಸದರಿ ವಾಹನವನ್ನು ಹಾಗೂ ಅರಣ್ಯ ಉತ್ಪನ್ನವನ್ನು ವಶಪಡಿಸಿಕೊಂಡು ಸ್ಥಳದಲ್ಲಿ ಪಂಚನಾಮೆ ಜರುಗಿಸಿ ಅರಣ್ಯ ಮೊಕದ್ದಮೆ ಸಂಖ್ಯೆ:244/2008–09 ನ್ನು ದಾಖಲು ಮಾಡಿರುತ್ತಾರೆ. ಸದರಿ ವಾಹನವನ್ನು ಬಿಡುಗಡೆಗೆ ಕೋರಿ ಈ ಕಛೇರಿ ನ್ಯಾಯಾಲಯಕ್ಕೆ ಯಾರು ಅರ್ಜಿ ಸಲ್ಲಿಸಿರುವುದಿಲ್ಲ. ಈ ಬಗ್ಗೆ ಉಲ್ಲೇಖ ಪತ್ರ 3 ರಲ್ಲಿ ವಾಹನದ ಮಾಲೀಕರ ವಿಳಾಸ ಹಾಗೂ ವಾಹನದ ವಿವರವುಳ್ಳ 'ಬಿ' ವಹಿಯನ್ನು ಒಪ್ಪಿಸಲು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಬೆಂಗಳೂರು ಇವರಿಗೆ ಪತ್ರ ಬರೆದಿರುತ್ತದೆ. ವಿವರವನ್ನು ಒಪ್ಪಿಸಿರುವುದಿಲ್ಲ. ಸದರಿ ವಾಹನಕ್ಕೆ ಸಂಬಂಧಿಸಿದ ವಾರಸುದಾರರು

ಯಾರು ಇಲ್ಲದೇ ಇದ್ದುದರಿಂದ ಕರ್ನಾಟಕ ಅರಣ್ಯ ಕಾಯಿದೆ 71(ಎ) ಪ್ರಕಾರ 30 ದಿನಗಳ ಕಾಲಾವಕಾಶ ನೀಡಿ ಯಾರಾದರೂ ವಾರಸುದಾರರು ಇದ್ದರೆ ವಾಹನಕ್ಕೆ ಸಂಬಂಧಿಸಿದ ದಾಖಲಾತಿಗಳ ಸಮೇತ ಹಕ್ಕುಬಾದ್ಯತೆಗಳನ್ನು ಈ ಕೆಳಗೆ ಸಹಿ ಮಾಡಿದವರ ಮುಂದೆ ಖುದ್ದಾಗಿಯಾಗಲೀ ಅಥವಾ ನ್ಯಾಯವಾದಿಗಳವರ ಮುಖಾಂತರವಾಗಲೀ ಹಾಜರುಪಡಿಸುವುದಕ್ಕೆ ಹಾಗೂ ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ ಸಂಬಂಧದಲ್ಲಿ ವಾಹನವನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ತಿಳುವಳಿಕೆ ಪತ್ರವನ್ನು ಕರ್ನಾಟಕ ರಾಜ್ಯ ಪತ್ರ ದಿನಾಂಕ:18.06.2009 ರಂದು ಪ್ರಚಾರ ಪಡಿಸಿ ಪ್ರಕಟಿಸಲಾಗಿದೆ.

ಪ್ರಕಟಣೆಯಂತೆ 30 ದಿನಗಳು ದಿನಾಂಕ:17.07.2009ಕ್ಕೆ ಮುಕ್ತಾಯಗೊಂಡಿದ್ದು, ವಾಹನದ ಬಗ್ಗೆ ಯಾವ ವಾರಸುದಾರರೂ ತಮ್ಮ ಮಾಲೀಕತ್ವವನ್ನು ದೃಢಪಡಿಸಿ ವಾಹನವನ್ನು ತಮ್ಮ ವಶಕ್ಕೆ ಕೋರಿಕೊಳ್ಳದೆ ಇದ್ದುದರಿಂದ ಸದರಿ ವಾಹನವನ್ನು ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆಯಲ್ಲಿ ಉಪಯೋಗಿಸಿರುವುದು ಸ್ಪಷ್ಟವಾಗಿರುತ್ತದೆ.

ಈ ಮೊಕದ್ದಮೆಯಲ್ಲಿ ಸಾಕಷ್ಟು ಕಾಲಾವಕಾಶವನ್ನು ಕೊಟ್ಟರೂ ಸಹ ಮಾಲೀಕರು ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಯವರು ಭದ್ರಾವತಿ ವಿಭಾಗ, ಭದ್ರಾವತಿ ಇವರ ನ್ಯಾಯಾಲಯದ ಮುಂದೆ ಬಂದು ವಾಹನದ ಮಾಲೀಕತ್ವದ ಬಗ್ಗೆ ಮೂಲ ದಾಖಲಾತಿಗಳನ್ನು ಹಾಜರುಪಡಿಸಿ, ತಾವು ತಪ್ಪಿತಸ್ತರಲ್ಲವೆಂಬುದನ್ನು ಸಾಬೀತು ಪಡಿಸಿರುವುದಿಲ್ಲವಾದ ಕಾರಣ ಮೇಲ್ಕಂಡ ವಾಹನವನ್ನು ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ಕೆಳಕಂಡಂತೆ ಆದೇಶ ಹೊರಡಿಸಿರುತ್ತೇನೆ.

**ಆದೇಶ**

ಮೇಲ್ಕಂಡ ವಿದ್ಯಾಮಾನಗಳನುಸಾರವಾಗಿ ಶ್ರೀ ಎಸ್.ಎಸ್. ಲಿಂಗರಾಜ, ಭಾ.ಆ.ಸೇ., ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಭದ್ರಾವತಿ ವಿಭಾಗ, ಭದ್ರಾವತಿ ಆದ ನಾನು ಅರಣ್ಯ ಕಾಯಿದೆ 1963 ನಿಯಮ 71ಎ(2)ರ ತಿದ್ದುಪಡಿ ಪ್ರಕಾರ ಮಾರುತಿ ವ್ಯಾನ್ ಸಂಖ್ಯೆ:ಜಿಎ–02–ಸಿ–5770 (ಛಾಸಿ ಸಂ: ಕಂಡುಬಂದಿಲ್ಲ, ಯಂತ್ರದ ಸಂಖ್ಯೆ:9692) ಹಾಗೂ ವಾಹನದಲ್ಲಿದ್ದ ಬೀಟೆ ತುಂಡುಗಳು 8=0.692 ಎಂ3ನ್ನು ಸರ್ಕಾರದ ಪರ ಮುಟ್ಟುಗೋಲು ಮಾಡಿ ಆದೇಶಿಸಲಾಗಿದೆ.

ಈ ಆದೇಶವನ್ನು ದಿನಾಂಕ:24.03.2010 ರಂದು ಈ ನ್ಯಾಯಾಲಯದ ಮೊಹರು ಹಾಗೂ ನನ್ನ ಸಹಿಯೊಂದಿಗೆ ಹೊರಡಿಸಿರುತ್ತೇನೆ.

**ಎಸ್.ಎಸ್. ಲಿಂಗರಾಜ**
ಅಧಿಕಾರಿಯುತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಭದ್ರಾವತಿ ವಿಭಾಗ, ಭದ್ರಾವತಿ.

ಪಿ.ಆರ್.546

**ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ನ್ಯಾಯಾಲಯ,**
**ಭದ್ರಾವತಿ ವಿಭಾಗ, ಭದ್ರಾವತಿ**

**ಸಂಖ್ಯೆ: ಎ3–ಎಫ್.ಓ.ಸಿ.ಸಿ.ಓ.ಎನ್–ಸಿಆರ್–13/2008–09, ದಿನಾಂಕ:24ನೇ ಮಾರ್ಚ್, 2010**

**ವಿಷಯ:** ಅಕ್ರಮ ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆ ಸಂಬಂಧ ಮೋಟಾರ್ ಬೈಕ್ ಸುಜುಕಿ ಮ್ಯಾಕ್ಸ್ ಸಂಖ್ಯೆ: ಕೆಎ–14–ಹೆಚ್–9107 ನ್ನು ವಶಪಡಿಸಿಕೊಂಡ ಬಗ್ಗೆ.

**ಉಲ್ಲೇಖ:**1) ವಲಯ ಅರಣ್ಯಾಧಿಕಾರಿ, ತರೀಕೆರೆ ವಲಯ, ತರೀಕೆರೆ ರವರ ಪ್ರಥಮ ಮಾಹಿತಿ ವರದಿ ಸಂಖ್ಯೆ:037086 ದಿನಾಂಕ:04.03.2009.

2) ವಲಯ ಅರಣ್ಯಾಧಿಕಾರಿ, ತರೀಕೆರೆ ವಲಯ, ತರೀಕೆರೆ ಇವರ ಪತ್ರ ಸಂಖ್ಯೆ:835/2008–09 ದಿನಾಂಕ:04.03.2009.

3) ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಶಿವಮೊಗ್ಗ ಇವರಿಗೆ ಬರೆದ ಪತ್ರದ ಸಮ ಸಂಖ್ಯೆ ದಿನಾಂಕ:12/19.03.2009.

4) ಅಧಿಕಾರಿಯುತ ಅಧಿಕಾರಿಗಳು, ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಭದ್ರಾವತಿ ವಿಭಾಗ, ಭದ್ರಾವತಿ ಇವರ ನ್ಯಾಯಾಲಯದ ಪ್ರಕಟಣೆ ಸಮ ಸಂಖ್ಯೆ ದಿನಾಂಕ:12.03.2009ನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ 02.07.2009 ರಂದು ಪ್ರಕಟಿಸಲಾಗಿದೆ.

**ಪ್ರಕಟಣೆಯ ಹಿನ್ನೆಲೆ:**

ದಿನಾಂಕ:04.03.2009ರಂದು ತರೀಕೆರೆ ವಲಯದ ಲಿಂಗದಹಳ್ಳಿ ಶಾಖೆಯ ವನಪಾಲಕರು ಹಾಗೂ ಸಿಬ್ಬಂದಿಯವರು ವರ್ಗದವರು ಖಚಿತ ವರ್ತಮಾನದ ಮೇರೆಗೆ ಲಿಂಗದಹಳ್ಳಿ ತರೀಕೆರೆ ರಸ್ತೆಯ ಲಿಂಗದಹಳ್ಳಿ ಅರಣ್ಯ ತನಿಖಾ ಠಾಣೆಯ ಬಳಿ ಕಾಯುತ್ತಾ ಕುಳಿತಿರುವಾಗ ಕೃಷ್ಣಾಪುರ ಗ್ರಾಮದ ಕಡೆಯಿಂದ ಒಂದು ಬೈಕ್ ಬರುತ್ತಿರುವುದನ್ನು ಕಂಡು ನಿಲ್ಲಿಸಲು ಸೂಚಿಸಿದಾಗ ನಿಲ್ಲಿಸದೇ ವೇಗವಾಗಿ ತಪ್ಪಿಸಿಕೊಳ್ಳಲು ಪ್ರಯತ್ನಪಟ್ಟಿದ್ದು ಸದರಿ ವಾಹನವನ್ನು ಬೆನ್ನಟ್ಟಿ ಹಿಡಿಯಲು ಪ್ರಯತ್ನಿಸಿದಾಗ ಆಸಾಮಿಗಳು ಬೈಕ್‌ನ್ನು ತರೀಕೆರೆ ರಸ್ತೆಯ ಅಮೃತಾಪುರ ಕಾವಲಿನ ಬಳಿ ಬೀಳಿಸಿ ಕತ್ತಲಲ್ಲಿ ಓಡಿ ಕೈಗೆ ಸಿಗದೇ ಪರಾರಿಯಾಗಿರುತ್ತಾರೆ. ವಾಹನದ ಬಳಿ ಬಂದು ಪರಿಶೀಲಿಸಿದಾಗ ವಾಹನ ಸುಜುಕಿ ಮ್ಯಾಕ್ಸ್ ಸಂಖ್ಯೆ:ಕೆಎ–14–ಹೆಚ್–9107 ರಲ್ಲಿ ಒಂದು ಸಾಗುವಾನಿ ತುಂಡು 0.072 ಎಂ3 ನ್ನು ಅಕ್ರಮವಾಗಿ ಸಾಗಾಣಿಕೆ ಮಾಡುತ್ತಿದ್ದು ಕಂಡುಬಂದಿರುತ್ತದೆ. ಸದರಿ ವಾಹನವನ್ನು ಹಾಗೂ ಅರಣ್ಯ ಉತ್ಪನ್ನವನ್ನು ವಶಪಡಿಸಿಕೊಂಡು ಸ್ಥಳದಲ್ಲಿ ಪಂಚನಾಮೆ ಜರುಗಿಸಿ ಅರಣ್ಯ ಮೊಕದ್ದಮೆ ಸಂಖ್ಯೆ:143/2008–09ನ್ನು ದಾಖಲು ಮಾಡಿರುತ್ತಾರೆ. ಸದರಿ ವಾಹನವನ್ನು ಬಿಡುಗಡೆಗೆ ಕೋರಿ ಈ ಕಛೇರಿ ನ್ಯಾಯಾಲಯಕ್ಕೆ ಯಾರು ಅರ್ಜಿ ಸಲ್ಲಿಸಿರುವುದಿಲ್ಲ. ಈ ಬಗ್ಗೆ ಉಲ್ಲೇಖ ಪತ್ರ 3ರಲ್ಲಿ ವಾಹನದ ಮಾಲೀಕರ ವಿಳಾಸ ಹಾಗೂ ವಾಹನದ ವಿವರವುಳ್ಳ 'ಬಿ' ವಹಿಯನ್ನು ಒಪ್ಪಿಸಲು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಬೆಂಗಳೂರು ಇವರಿಗೆ ಪತ್ರ ಬರೆದಿರುತ್ತದೆ. ವಿವರವನ್ನು ಒಪ್ಪಿಸಿರುವುದಿಲ್ಲ. ಸದರಿ ವಾಹನಕ್ಕೆ ಸಂಬಂಧಿಸಿದ ವಾರಸುದಾರರು ಯಾರು ಇಲ್ಲದೇ ಇದ್ದುದರಿಂದ ಕರ್ನಾಟಕ ಅರಣ್ಯ ಕಾಯಿದೆ 71(ಎ) ಪ್ರಕಾರ 30 ದಿನಗಳ ಕಾಲಾವಕಾಶ ನೀಡಿ ಯಾರಾದರೂ ವಾರಸುದಾರರು ಇದ್ದರೆ ವಾಹನಕ್ಕೆ ಸಂಬಂಧಿಸಿದ ದಾಖಲಾತಿಗಳ ಸಮೇತ ಹಕ್ಕುಬಾಧ್ಯತೆಗಳನ್ನು ಈ ಕೆಳಗೆ ಸಹಿ ಮಾಡಿದವರ ಮುಂದೆ ಖುದ್ದಾಗಿಯಾಗಲೀ ಅಥವಾ ನ್ಯಾಯವಾದಿಗಳವರ ಮುಖಾಂತರವಾಗಲೀ ಹಾಜರುಪಡಿಸುವುದಕ್ಕೆ ಹಾಗೂ ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ ಸಂಬಂಧದಲ್ಲಿ ವಾಹನವನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ತಿಳುವಳಿಕೆ ಪತ್ರವನ್ನು ಕರ್ನಾಟಕ ರಾಜ್ಯ ಪತ್ರ ದಿನಾಂಕ:02.07.2009 ರಂದು ಪ್ರಚಾರ ಪಡಿಸಿ ಪ್ರಕಟಿಸಲಾಗಿದೆ.

ಪ್ರಕಟಣೆಯಂತೆ 30 ದಿನಗಳು ದಿನಾಂಕ:01.08.2009ಕ್ಕೆ ಮುಕ್ತಾಯಗೊಂಡಿದ್ದು, ವಾಹನದ ಬಗ್ಗೆ ಯಾವ ವಾರಸುದಾರರೂ ತಮ್ಮ ಮಾಲೀಕತ್ವವನ್ನು ದೃಢಪಡಿಸಿ ವಾಹನವನ್ನು ತಮ್ಮ ವಶಕ್ಕೆ ಕೋರಿಕೊಳ್ಳದೆ ಇದ್ದುದರಿಂದ ಸದರಿ ವಾಹನವನ್ನು ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆಯಲ್ಲಿ ಉಪಯೋಗಿಸಿರುವುದು ಸ್ಪಷ್ಟವಾಗಿರುತ್ತದೆ.

ಈ ಮೊಕದ್ದಮೆಯಲ್ಲಿ ಸಾಕಷ್ಟು ಕಾಲಾವಕಾಶವನ್ನು ಕೊಟ್ಟರೂ ಸಹ ಮಾಲೀಕರು ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಯವರು ಭದ್ರಾವತಿ ವಿಭಾಗ, ಭದ್ರಾವತಿ ಇವರ ನ್ಯಾಯಾಲಯದ ಮುಂದೆ ಬಂದು ವಾಹನದ ಮಾಲೀಕತ್ವದ ಬಗ್ಗೆ ಮೂಲ ದಾಖಲಾತಿಗಳನ್ನು ಹಾಜರುಪಡಿಸಿ, ತಾವು ತಪ್ಪಿತಸ್ಥರಲ್ಲವೆಂಬುದನ್ನು ಸಾಬೀತು ಪಡಿಸಿರುವುದಿಲ್ಲವಾದ ಕಾರಣ ಮೇಲ್ಕಂಡ ವಾಹನವನ್ನು ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ಕೆಳಕಂಡಂತೆ ಆದೇಶ ಹೊರಡಿಸಿರುತ್ತೇನೆ.

**ಆದೇಶ**

ಮೇಲ್ಕಂಡ ವಿದ್ಯಾಮಾನಗಳನುಸಾರವಾಗಿ ಶ್ರೀ ಎಸ್.ಎಸ್. ಲಿಂಗರಾಜ, ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಭದ್ರಾವತಿ ವಿಭಾಗ, ಭದ್ರಾವತಿ ಆದ ನಾನು ಅರಣ್ಯ ಕಾಯಿದೆ 1963 ನಿಯಮ 71ಎ(2)ರ ತಿದ್ದುಪಡಿ ಪ್ರಕಾರ ಮೋಟಾರ್ ಬೈಕ್ ಸುಜುಕಿ ಮ್ಯಾಕ್ಸ್ ಸಂಖ್ಯೆ:ಕೆಎ–14–ಹೆಚ್–9107(ಛಾಸಿ ನಂ.1601F587600, ಯಂತ್ರದ ಸಂಖ್ಯೆ:1601M631697) ಹಾಗೂ ವಾಹನದಲ್ಲಿದ್ದ ಸಾಗುವಾನಿ ತುಂಡುಗಳು 1=0.072 ಎಂ3 ನ್ನು ಸರ್ಕಾರದ ಪರ ಮುಟ್ಟುಗೋಲು ಮಾಡಿ ಆದೇಶಿಸಲಾಗಿದೆ.

ಈ ಆದೇಶವನ್ನು ದಿನಾಂಕ:24.03.2010 ರಂದು ಈ ನ್ಯಾಯಾಲಯದ ಮೊಹರು ಹಾಗೂ ನನ್ನ ಸಹಿಯೊಂದಿಗೆ ಹೊರಡಿಸಿರುತ್ತೇನೆ.

**ಎಸ್.ಎಸ್. ಲಿಂಗರಾಜ**
ಅಧಿಕಾರಿಯುತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಭದ್ರಾವತಿ ವಿಭಾಗ, ಭದ್ರಾವತಿ.

ಪಿ.ಆರ್.547

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್:219/2009–10, ದಿನಾಂಕ:11ನೇ ಮಾರ್ಚ್, 2010**

**ಉಪಸ್ಥಿತರು: ಡಾ॥ ವೈ. ಮಂಜುನಾಥ್,**

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ದ** | **ಪ್ರತಿವಾದಿ/ ಆರೋಪಿ** |
|---|---|---|
| ಅಬಕಾರಿ ಉಪ ನಿರೀಕ್ಷಕರು, ಹುಣಸೂರು ಉಪವಿಭಾಗ, ಹುಣಸೂರು. | | ಲೋಕೇಶ್ ಹೆಚ್.ಆರ್. ಬಿನ್ ರಾಮೇಗೌಡ |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:13.01.2010ರಂದು ಬೆಳಿಗ್ಗೆ 8.45 ಗಂಟೆ ಸಮಯದಲ್ಲಿ ಅಬಕಾರಿ ಉಪ ನಿರೀಕ್ಷಕರು, ಹುಣಸೂರು ಉಪವಿಭಾಗ, ಹುಣಸೂರು ಇವರು ಹುಣಸೂರು ತಾಲ್ಲೂಕು, ಹಿರಿಕ್ಯಾತನಹಳ್ಳಿ ಗ್ರಾಮದ ರಸ್ತೆ, ಕಟ್ಟೆಮಳಲವಾಡಿ ಜಂಕ್ಷನ್ ಹತ್ತಿರ ಕೆಎ–09/ಇಸಿ–8703 ನೋಂದಣಿ ಸಂಖ್ಯೆಯ ಟಿವಿಎಸ್ ವಿಕ್ಟರ್ ಜಿಎಲ್ ವಾಹನದಲ್ಲಿ ಅಕ್ರಮವಾಗಿ 25 ಲೀ ಕಲಬೆರೆಕೆ ಸೇಂದಿಯನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಸೇಂದಿಯನ್ನು ಜಪ್ತುಗೊಳಿಸಿ, ಪ್ರಥಮ ಮಾಹಿತಿ ವರದಿ ಸಂಖ್ಯೆ:05/2009–10 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11, 13, 14ರ ರೀತ್ಯಾ ಅಪರಾದವಾಗಿದ್ದು, 32, 38(ಎ) ಮತ್ತು 43(ಎ)ರ ರೀತ್ಯಾ ಶಿಕ್ಷಾರ್ಹವಾದ್ದರಿಂದ ಲೋಕೇಶ್ ಹೆಚ್.ಆರ್. ಬಿನ್ ರಾಮೇಗೌಡ ಎಂಬ ಆರೋಪಿಯನ್ನು ದಸ್ತಗಿರಿ ಮಾಡಿರುವುದಾಗಿ ಮೊಕದ್ದಮೆ ದಾಖಲಿಸಿ, ಮುಂದಿನ ಕ್ರಮಕ್ಕಾಗಿ ಸಂಬಂಧಪಟ್ಟ ದಾಖಲಾತಿಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ವಶಪಡಿಸಿಕೊಂಡ ವಾಹನದ ಮಾಲೀಕತ್ವದ ವಿವರವುಳ್ಳ 'ಬಿ' ವಹಿಯ ಪ್ರತಿಯನ್ನು ಕೋರಿ, ಮೈಸೂರು ಜಿಲ್ಲೆಯ ಪೂರ್ವ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ದಿನಾಂಕ:22.02.2010ರಂದು ಈ ಪ್ರಾಧಿಕಾರದಿಂದ ಪತ್ರ ಬರೆಯಲಾಗಿರುತ್ತದೆ. ಹುಣಸೂರು ವಲಯದ ಅಬಕಾರಿ ನಿರೀಕ್ಷಕರು ವಾಹನ ಮಾಲೀಕರ ವಿಳಾಸವನ್ನು ಸಂಬಂಧಪಟ್ಟ ಪ್ರಾದೇಶಿಕ ಅಧಿಕಾರಿಗಳಿಂದ ಪಡೆದು ಸಲ್ಲಿಸಿರುತ್ತಾರೆ. ಅದರಂತೆ ಹೆಚ್.ಪಿ. ಪ್ರಶಾಂತ್ ಬಿನ್ ಹೆಚ್.ಡಿ. ಪ್ರಕಾಶ್, ನಂ.1064, 9ನೇ ಕ್ರಾಸ್, ವಿವೇಕನಂದ ನಗರ, ಮೈಸೂರು ಇವರ ಒಡೆತನದಲ್ಲಿರುವುದು ದೃಢಪಟ್ಟಿರುತ್ತದೆ. ಸದರಿಯವರಿಗೆ ಈ ಪ್ರಾಧಿಕಾರದಿಂದ ದಿನಾಂಕ:26.02.2010ರಂದು ವಾಹನ ಮತ್ತು ಸೇಂದಿಯನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ಕಲಂ 43(ಬಿ)ರ ಅಡಿಯಲ್ಲಿ ಕಾರಣ ಕೇಳುವ ನೋಟೀಸ್‌ಗಳನ್ನು ದಿನಾಂಕ:06.03.2010ರಂದು ಜಾರಿಗೊಳಿಸಿ ಹುಣಸೂರು ವಲಯದ ಅಬಕಾರಿ ನಿರೀಕ್ಷಕರು ದಿನಾಂಕ:09.03.2010ರಂದು ಈ ಪ್ರಾಧಿಕಾರಕ್ಕೆ ವರದಿ ಮಾಡಿರುತ್ತಾರೆ.

ಪ್ರಶಾಂತ್ ಹೆಚ್.ಪಿ. ಬಿನ್ ಹೆಚ್.ಡಿ. ಪ್ರಕಾಶ್ ಇವರು ಪ್ರಾಧಿಕಾರದಿಂದ ನೀಡಲಾದ ಕಾರಣ ಕೇಳಿ ನೋಟೀಸಿಗೆ ಪ್ರತಿಕ್ರಿಯಿಸಿ ಪ್ರತ್ಯುತ್ತರವನ್ನು ನೀಡಿರುತ್ತಾರೆ. ಸದರಿ ವಾಹನಕ್ಕೆ ಸಂಬಂಧಿಸಿದಂತೆ ದಿನಾಂಕ:20.08.2006ರಂದು ಸೋನಾ ಮೋಟಾರ್ಸ್, ಮೈಸೂರು (Exchange Offer) ವಾಹನ ಪರಸ್ಪರ ಬದಲಾವಣೆಯಡಿಯಲ್ಲಿ ದಿನಾಂಕ:21.08.2006ರಂದು ಟಿ.ವಿ.ಎಸ್. ವಿಕ್ಟರ್ ವಾಹನವನ್ನು ಶೋರೂಂಗೆ ವಹಿಸಿ ಅಪಾಚೆ ವಾಹನವನ್ನು ತೆಗೆದುಕೊಂಡಿರುತ್ತೇನೆ ಎಂದು ತಿಳಿಸಿರುತ್ತಾರೆ. ಇದನ್ನು ಸೂಕ್ಷ್ಮವಾಗಿ ಗಮನಿಸಿದಾಗ ಈ ವಾಹನವು ತನ್ನದಲ್ಲವೆಂದು ತಿಳಿಸಿದಂತಾಗಿರುತ್ತದೆ.

ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ದಿನಾಂಕ:13.01.2010ರಂದು ಹುಣಸೂರು ತಾಲ್ಲೂಕು, ಹಿರಿಕ್ಯಾತನಹಳ್ಳಿ ಗ್ರಾಮದ ರಸ್ತೆ, ಕಟ್ಟೆಮಲವಾಡಿ ಜಂಕ್ಷನ್ ಹತ್ತಿರ ಕೆಎ–09/ಇಸಿ–8703 ನೋಂದಣಿ ಸಂಖ್ಯೆಯ ಟಿವಿಎಸ್ ವಿಕ್ಟರ್ ಜಿಎಲ್ ವಾಹನದಲ್ಲಿ ಅಕ್ರಮವಾಗಿ 25 ಲೀ. ಕಲಬೆರೆಕೆ ಸೇಂದಿಯನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಸಂದರ್ಭದಲ್ಲಿ ಆರೋಪಿ ಲೋಕೇಶ್ ಹೆಚ್.ಆರ್. ಬಿನ್ ರಾಮೇಗೌಡ ಇವರನ್ನು ದಸ್ತಗಿರಿಗೊಳಿಸಲಾಗಿರುತ್ತದೆ. ವಾಹನಕ್ಕೆ ಸಂಬಂಧಪಟ್ಟ ಆರೋಪಿಗಳಾಗಲೀ/ ವಾಹನ ಮಾಲೀಕರಾಗಲೀ ತಮ್ಮ ನಿಲುವು ಏನೆಂಬುದನ್ನು ಮತ್ತು ಮಾಲೀಕರ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಇದುವರೆವಿಗೂ ಪ್ರಾಧಿಕಾರದ ಮುಂದೆ

ಹಾಜರಾಗಿ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ. ಹಾಗೂ ವಾಹನ ಬಿಡುಗಡೆಗಾಗಿ ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆಸಿರುವುದಿಲ್ಲ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (2) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ, ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಆಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ/ ಏಜೆಂಟರ್ ಗಮನಕ್ಕೆ ಬಾರದೆ ಮತ್ತು ಅವರುಗಳು ಶಾಮೀಲಾಗದೆ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೆ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/219/2009–10, ದಿನಾಂಕ:11ನೇ ಮಾರ್ಚ್, 2010**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ)ರ ಪ್ರಕಾರ ಅನುಸರಿಸಬೇಕಾದ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43(ಎ) (2) ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬಕಾರಿ ಉಪ ನಿರೀಕ್ಷಕರು, ಹುಣಸೂರು ಉಪವಿಭಾಗ, ಹುಣಸೂರು ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ: 05/2009–10, ದಿನಾಂಕ:13.01.2010 ರಂದು ವಶಪಡಿಸಿಕೊಂಡ ಕೆಎ–09/ಇಸಿ–8703 ನೋಂದಣಿ ಸಂಖ್ಯೆಯ ಟಿವಿಎಸ್ ವಿಕ್ಟರ್ ಜಿಎಲ್ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2010ನೇ ಇಸವಿ ಮಾರ್ಚ್ ತಿಂಗಳ 11ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಖ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

**ಡಾ॥ ವೈ. ಮಂಜುನಾಥ್**
ಡೆಪ್ಯೂಟಿ ಕಮೀಷನರ್ ಎಕ್ಸೈಜ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್.524

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್:573/2008–09, ದಿನಾಂಕ:11ನೇ ಮಾರ್ಚ್, 2010**

**ಉಪಸ್ಥಿತರು: ಡಾ॥ ವೈ. ಮಂಜುನಾಥ್,**
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ/ ಆರೋಪಿ** |
|---|---|---|
| ಆರಕ್ಷಕ ಉಪ ನಿರೀಕ್ಷಕರು, ಸರಸ್ವತಿಪುರಂ ಪೊಲೀಸ್ ಠಾಣೆ, ಮೈಸೂರು. | | ಸಿದ್ದಯ್ಯ ಅ॥ ಸಿದ್ಧಯ್ಯ |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:11.11.2008ರಂದು ಸಂಜೆ 5.30 ಗಂಟೆ ಸಮಯದಲ್ಲಿ ಆರಕ್ಷಕ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ವಿಭಾಗ, ಮೈಸೂರು ಇವರು ಮೈಸೂರು ತಾ: ಮೈಸೂರು–ಗದ್ದಿಗೆ ರಸ್ತೆ, ಬೋಗಾದಿಯ ಮರಡಿಲಿಂಗೇಶ್ವರ ವುಡ್ ಪ್ಲೈನಿಂಗ್ ವರ್ಕ್ಸ್‌ನ ಮುಂಭಾಗದಲ್ಲಿ ಕೆಎ–09/ಇಜಿ–3386 ನೋಂದಣಿ ಸಂಖ್ಯೆಯ ಟಿವಿಎಸ್ ಎಕ್ಸೆಲ್ ಸೂಪರ್ ವಾಹನದಲ್ಲಿ

ಅಕ್ರಮವಾಗಿ 6.300 ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಮದ್ಯವನ್ನು ಜಪ್ತುಗೊಳಿಸಿ, ಆರೋಪಿಯಾದ ಸಿದ್ಧಯ್ಯ ಅ॥ ಸಿದ್ಧರಾಜು ಬಿನ್ ಸಿದ್ದಯ್ಯ ಎಂಬುವವನನ್ನು ದಸ್ತಗಿರಿ ಮಾಡಿ, ಮುಂದಿನ ಕ್ರಮ ಜರುಗಿಸಲು ಸರಸ್ವತಿಪುರಂ ಪೊಲೀಸ್ ಠಾಣೆಗೆ ಹಸ್ತಾಂತರಿಸಿ ಠಾಣಾ ಮೊಕದ್ದಮೆ ಸಂಖ್ಯೆ:182/2008ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11, 32, 34ರ ರೀತ್ಯಾ ಮೊಕದ್ದಮೆ ದಾಖಲಿಸಿ, ಜಪ್ತುಪಡಿಸಲಾದ ವಾಹನ ಮತ್ತು ಮದ್ಯವನ್ನು ಅಬಕಾರಿ ಇಲಾಖೆಗೆ ಹಸ್ತಾಂತರಿಸಲು ದಿನಾಂಕ:18.05.2009ರಂದು ಈ ಪ್ರಾಧಿಕಾರದ ಅನುಮತಿಗಾಗಿ ಕೋರಿರುತ್ತಾರೆ. ಅಂತೆಯೇ ದಿನಾಂಕ:22.05.2008ರಂದು ಮೈಸೂರು ವಲಯ–3ರ ಅಬಕಾರಿ ನಿರೀಕ್ಷಕರಿಗೆ ಹಸ್ತಾಂತರಿಸಲು ಅನುಮತಿ ನೀಡಲಾಗಿರುತ್ತದೆ.

ವಾಹನದ ಮಾಲೀಕರಾದ ಸಿದ್ಧಯ್ಯ ಬಿನ್ ಲೇ॥ ಸಿದ್ಧಯ್ಯ, ಕಮ್ಮರವಳ್ಳಿ ಗ್ರಾಮ, ಡಿ.ಎಂ.ಹಳ್ಳಿ ಅಂಚೆ, ಇಲವಾಲ ಹೋ॥ ಮೈಸೂರು ತಾ: ಇವರು ತಮ್ಮ ವಕೀಲ ಮುಖೇನ ದಿನಾಂಕ:01.12.2008ರಂದು ವಕಾಲತ್ತಿನೊಂದಿಗೆ ಅರ್ಜಿ ಸಲ್ಲಿಸಿ ಜಪ್ತುಪಡಿಸಲಾದ ಟಿವಿಎಸ್ ಎಕ್ಸೆಲ್ ಸೂಪರ್ ಸಂಖ್ಯೆ: ಕೆಎ–09/ಇಜಿ–3386 ವಾಹನವನ್ನು ತಮ್ಮ ಮಧ್ಯಂತರ ಸುಪರ್ದಿಗೆ ಬಿಡುಗಡೆ ಮಾಡಬೇಕೆಂದು ಕೋರಿರುತ್ತಾರೆ.

ಅರ್ಜಿದಾರರು ಸಲ್ಲಿಸಿರುವ ದಾಖಲೆಗಳಂತೆ ಸದರಿ ವಾಹನವು ಸಿದ್ಧಯ್ಯ ಬಿನ್ ಲೇ॥ ಸಿದ್ಧಯ್ಯ ಇವರ ಒಡೆತನದಲ್ಲಿದ್ದು, ಸದರಿಯವರಿಗೆ ಈ ಪ್ರಾಧಿಕಾರದಿಂದ ದಿನಾಂಕ:23.05.2009 ರಂದು ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ಕಲಂ 43(ಬಿ)ರ ಅಡಿಯಲ್ಲಿ ಕಾರಣ ಕೇಳುವ ನೋಟೀಸ್‌ನ್ನು ಜಾರಿ ಮಾಡಲಾಗಿರುತ್ತದೆ.

ವಶಪಡಿಸಿಕೊಂಡ ವಾಹನದ ಮಾಲೀಕತ್ವದ ವಿವರವುಳ್ಳ 'ಬಿ' ವಹಿಯ ಪ್ರತಿಯನ್ನು ಕೋರಿ, ಮೈಸೂರು ಜಿಲ್ಲೆಯ ಪೂರ್ವ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ದಿನಾಂಕ:23.05.2009ರಂದು ಈ ಪ್ರಾಧಿಕಾರದಿಂದ ಪತ್ರ ಬರೆಯಲಾಗಿರುತ್ತದೆ. ಸದರಿ ವಾಹನದ 'ಬಿ' ವಹಿಯ ಪ್ರತಿಯನ್ನು ಈ ಪ್ರಾಧಿಕಾರಕ್ಕೆ ಕಳುಹಿಸಿರುತ್ತಾರೆ.

ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ದಿನಾಂಕ:11.11.2008ರಂದು ಮೈಸೂರು ತಾ: ಮೈಸೂರು–ಗದ್ದಿಗೆ ರಸ್ತೆ, ಬೋಗಾದಿಯ ಮರಡಿಲಿಂಗೇಶ್ವರ ವುಡ್ ಪ್ಲೈನಿಂಗ್ ವರ್ಕ್ಸ್‌ನ ಮುಂಭಾಗದಲ್ಲಿ ಕೆಎ–09/ಇಜಿ–3386 ನೋಂದಣಿ ಸಂಖ್ಯೆ:ಟಿವಿಎಸ್ ಎಕ್ಸೆಲ್ ಸೂಪರ್ ವಾಹನದಲ್ಲಿ ಅಕ್ರಮವಾಗಿ 6.300 ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಪ್ರಕರಣದಲ್ಲಿ ಸಿದ್ಧಯ್ಯ ಎಂಬ ಆರೋಪಿಯನ್ನು ದಸ್ತಗಿರಿ ಮಾಡಲಾಗಿರುತ್ತದೆ. ಆರೋಪಿ ಮತ್ತು ವಾಹನ ಮಾಲೀಕರು ಒಬ್ಬರೇ ಆಗಿರುವುದರಿಂದ ವಾಹನ ಮಧ್ಯಂತರ ವಶಕ್ಕೆ ಬಿಡುಗಡೆ ಮಾಡುವುದು ಸಮಂಜಸವಲ್ಲವೆಂದು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುತ್ತದೆ. ವಾಹನ ಮಾಲೀಕರು ಕೃತ್ಯ ನಡೆದ ದಿನದಂದು ಕೃತ್ಯ ಸ್ಥಳದಲ್ಲಿ ಸಿಕ್ಕಿಬಿದ್ದಿರುವುದರಿಂದ ಈ ಕೃತ್ಯವು ವಾಹನ ಮಾಲೀಕರ ತಿಳುವಳಿಕೆಯಲ್ಲಿ ನಡೆದಿದೆ ಎಂಬುದು ಸ್ಪಷ್ಟವಾಗಿ ಕಂಡುಬಂದಿರುತ್ತದೆ. ಈ ಬಗ್ಗೆ ಪ್ರತಿವಾದಿಗಳಾಗಲಿ ಅವರ ವಕೀಲರಾಗಲಿ ವಾಹನ ಮಾಲೀಕರ ತಿಳುವಳಿಕೆಯಲ್ಲಿ ಈ ಕೃತ್ಯ ನಡೆದಿರುವುದಿಲ್ಲ ಎಂಬುದರ ಬಗ್ಗೆ ತನ್ನ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಇದೂವರೆಗೂ ಈ ಪ್ರಾಧಿಕಾರದ ಮುಂದೆ ಹಾಜರಾಗಿ ತನ್ನ ನಿಲುವು ಏನೆಂಬುದನ್ನು ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ. ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು 15 ತಿಂಗಳಿಗೂ ಹೆಚ್ಚು ಕಾಲ ಕಳೆದಿರುತ್ತದೆ. ಜಪ್ತಿಯಾದ ವಾಹನವನ್ನು ಮಧ್ಯಂತರ ಬಿಡುಗಡೆಗಾಗಿ ವಕೀಲ ಮುಖೇನ ಅರ್ಜಿಯನ್ನು ಸಲ್ಲಿಸಲಾಗಿದ್ದು, ವಾಹನ ಬಿಡುಗಡೆಗಾಗಿ ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆದಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಆಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ/ ಏಜೆಂಟರ್ ಗಮನಕ್ಕೆ ಬಾರದೆ ಮತ್ತು ಅವರುಗಳು ಶಾಮೀಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೆ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/573/2008–09, ದಿನಾಂಕ:11ನೇ ಮಾರ್ಚ್, 2010**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ)ರ ಪ್ರಕಾರ ಅನುಸರಿಸಬೇಕಾದ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43(ಎ) (2) ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಆರಕ್ಷಕ ಉಪ ನಿರೀಕ್ಷಕರು, ಸರಸ್ವತಿಪುರಂ

ಪೊಲೀಸ್ ಠಾಣೆ ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:182/2008, ದಿನಾಂಕ:11.11.2008 ರಂದು ವಶಪಡಿಸಿಕೊಂಡ ಕೆಎ–09/ಇಜಿ–3386 ನೋಂದಣಿ ಸಂಖ್ಯೆಯ ಟಿವಿಎಸ್ ಎಕ್ಸೆಲ್ ಸೂಪರ್ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2010ನೇ ಇಸವಿ ಮಾರ್ಚ್ ತಿಂಗಳ 11ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಖ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

**ಡಾ|| ವೈ. ಮಂಜುನಾಥ್**
ಡೆಪ್ಯೂಟಿ ಕಮೀಷನರ್ ಎಕ್ಸೈಜ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್.525

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಲಯ**

**ಸಂಖ್ಯೆ: ಡಿಟಿಸಿಆರ್:580/2008–09, ದಿನಾಂಕ:11ನೇ ಮಾರ್ಚ್, 2010**

**ಉಪಸ್ಥಿತರು: ಡಾ|| ವೈ. ಮಂಜುನಾಥ್,**
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ/ ಆರೋಪಿ** |
|---|---|---|
| ಆರಕ್ಷಕ ಉಪ ನಿರೀಕ್ಷಕರು,<br>ದೇವರಾಜ ಪೊಲೀಸ್ ಠಾಣೆ, ಮೈಸೂರು ನಗರ. | | ಸೋಮಶೇಖರ ಬಿನ್ ಜವರನಾಯಕ |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:16.02.2009ರಂದು ಮಧ್ಯಾಹ್ನ 1.15 ಗಂಟೆ ಸಮಯದಲ್ಲಿ ಆರಕ್ಷಕ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ವಿಭಾಗ, ವಿಶೇಷ ಪೊಲೀಸ್ ಠಾಣೆ, ಮೈಸೂರು ನಗರ, ಮೈಸೂರು ಇವರು ಮೈಸೂರು ನಗರ, ಚಾಮುಂಡೇಶ್ವರಿ ಚಿತ್ರಮಂದಿರದ ಪಕ್ಕದ ರಸ್ತೆಯ, ರಘುಲಾಲ್ ಮೆಡಿಕಲ್ ಸ್ಟೋರ್ ಮುಂಭಾಗದಲ್ಲಿ ಅಕ್ರಮವಾಗಿ ಕೆಎ–09/ಇಎಂ–8119 ನೋಂದಣಿ ಸಂಖ್ಯೆಯ ಟಿವಿಎಸ್ ಎಕ್ಸೆಲ್ ಸೂಪರ್ ಹೆವಿ ಡ್ಯೂಟಿ ವಾಹನದಲ್ಲಿ 19.080 ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಮದ್ಯವನ್ನು ಜಪ್ತುಗೊಳಿಸಿ, ಆರೋಪಿಯಾದ ಸೋಮಶೇಖರ ಬಿನ್ ಜವರನಾಯಕ ಎಂಬುವವನನ್ನು ದಸ್ತಗಿರಿ ಮಾಡಿ, ಮುಂದಿನ ಕ್ರಮ ಜರುಗಿಸಲು ದೇವರಾಜ ಪೊಲೀಸ್ ಠಾಣೆಗೆ ಹಸ್ತಾಂತರಿಸಿ, ಠಾಣಾ ಮೊಕದ್ದಮೆ ಸಂಖ್ಯೆ: 51/2009ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11, 14, 32, 34ರ ರೀತ್ಯಾ ಮೊಕದ್ದಮೆ ದಾಖಲಿಸಿ, ಜಪ್ತುಪಡಿಸಲಾದ ವಾಹನ ಮತ್ತು ಮದ್ಯವನ್ನು ಅಬಕಾರಿ ಇಲಾಖೆಗೆ ಹಸ್ತಾಂತರಿಸಲು ದಿನಾಂಕ:20.05.2009ರಂದು ಈ ಪ್ರಾಧಿಕಾರಕ್ಕೆ ವರದಿಯನ್ನು ಸಲ್ಲಿಸಿ, ಅನುಮತಿಗಾಗಿ ಕೋರಿರುತ್ತಾರೆ. ಅಂತೆಯೇ ದಿನಾಂಕ:22.05.2009ರಂದು ಮೈಸೂರು ವಲಯ ಸಂಖ್ಯೆ:1ರ ಅಬಕಾರಿ ನಿರೀಕ್ಷಕರಿಗೆ ಹಸ್ತಾಂತರಿಸಲು ಅನುಮತಿ ನೀಡಲಾಗಿದೆ.

ವಾಹನದ ಮಾಲೀಕರಾದ ಸೋಮಶೇಖರ್ ಬಿನ್ ಜವರನಾಯಕ ಇವರು ತಮ್ಮ ಪರ ವಕೀಲರಾದ ಎಸ್. ಸತೀಶ್ ಇವರ ಮೂಲಕ ವಕಲಾತ್ತಿನೊಂದಿಗೆ ದಿನಾಂಕ:05.05.2009ರಂದು ಅರ್ಜಿಯನ್ನು ಸಲ್ಲಿಸಿ, ಪ್ರಾಧಿಕಾರವು ವಿಧಿಸುವ ಷರತ್ತುಗಳನ್ನು ಪೂರೈಸಲು ಬದ್ಧನಿರುವುದಾಗಿ ಒಪ್ಪಿ, ವಾಹನವನ್ನು ತನ್ನ ಮಧ್ಯಕಾಲೀನ ವಶಕ್ಕೆ ಬಿಡುಗಡೆ ಮಾಡಬೇಕೆಂದು ಕೋರಿರುತ್ತಾರೆ.

ವಶಪಡಿಸಿಕೊಂಡ ವಾಹನದ ಮಾಲೀಕತ್ವದ ವಿವರವುಳ್ಳ 'ಬಿ' ವಹಿಯ ಪ್ರತಿಯನ್ನು ಕೋರಿ, ಮೈಸೂರು ಪೂರ್ವ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ದಿನಾಂಕ:23.05.2009ರಂದು ಈ ಪ್ರಾಧಿಕಾರದಿಂದ ಪತ್ರ ಬರೆಯಲಾಗಿದೆ. ಆದರೆ ಇದುವರೆಗೆ ಯಾವುದೇ ಪ್ರತಿಕ್ರಿಯೆ ಇರುವುದಿಲ್ಲ.

ಅರ್ಜಿದಾರರು ಸಲ್ಲಿಸಿರುವ ದಾಖಲೆಗಳಂತೆ ಸದರಿ ವಾಹನವು ಸೋಮಶೇಖರ್ ಬಿನ್ ಜೆ. ಜವರನಾಯಕ, ಮೈಸೂರು ತಾಲ್ಲೂಕು ಇವರ ಒಡೆತನದಲ್ಲಿದ್ದು, ಸದರಿಯವರಿಗೆ ಈ ಪ್ರಾಧಿಕಾರದಿಂದ ವಾಹನ ಮತು ಮದ್ಯವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ಕಲಂ 43(ಬಿ)ರ ಅಡಿಯಲ್ಲಿ ದಿನಾಂಕ:23.05.2009ರಂದು ಕಾರಣ ಕೇಳುವ ನೋಟೀಸ್‌ನ್ನು ನೋಂದಣಿ ಅಂಚೆ ಮೂಲಕ ಕಳುಹಿಸಲಾಗಿದ್ದು, ಈ ವ್ಯಕ್ತಿಯು ಮೃತಪಟ್ಟಿರುವುದಾಗಿ ಷರಾ ನಮೂದಿಸಿ, ಅಂಚೆ ಇಲಾಖೆಯವರು ಈ ಪ್ರಾಧಿಕಾರಕ್ಕೆ ಹಿಂದಿರುಗಿಸಿರುತ್ತಾರೆ.

ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ದಿನಾಂಕ:16.02.2009ರಂದು ಮೈಸೂರುನಗರ, ಚಾಮುಂಡೇಶ್ವರಿ ಚಿತ್ರಮಂದಿರದ ಪಕ್ಕದ ರಸ್ತೆಯ, ರಘುಲಾಲ್ ಮೆಡಿಕಲ್ ಸ್ಟೋರ್ ಮುಂಭಾಗದಲ್ಲಿ ಅಕ್ರಮವಾಗಿ ಕೆಎ–09/ಇಎಂ–8119 ನೋಂದಣಿ ಸಂಖ್ಯೆಯ ಟಿ.ವಿ.ಎಸ್. ಎಕ್ಸೆಲ್ ಸೂಪರ್ ಹೆವಿ ಡ್ಯೂಟಿ ವಾಹನದಲ್ಲಿ 19.080 ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಸಂದರ್ಭದಲ್ಲಿ ಸೋಮಶೇಖರ್ ಬಿನ್ ಜವರನಾಯಕ ಎಂಬುವರನ್ನು ದಸ್ತಗಿರಿ ಮಾಡಲಾಗಿರುತ್ತದೆ. ಈ ಪ್ರಕರಣದಲ್ಲಿ ಆರೋಪಿ ಮತ್ತು ವಾಹನದ ಮಾಲೀಕರು ಒಬ್ಬರೇ ಆಗಿರುವುದರಿಂದ ಸದರಿ ವಾಹನವನ್ನು ಮಧ್ಯಂತರ ವಶಕ್ಕೆ ಬಿಡುಗಡೆ ಮಾಡುವುದು ಸಮಂಜಸವಲ್ಲವೆಂದು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುತ್ತದೆ. ವಾಹನದ ಮಾಲೀಕರು ಕೃತ್ಯ ನಡೆದ ದಿನದಂದು ಕೃತ್ಯ ನಡೆದ ಸ್ಥಳದಲ್ಲಿ ಸಿಕ್ಕಿಬಿದ್ದಿರುವುದರಿಂದ ಈ ಕೃತ್ಯವು ವಾಹನ ಮಾಲೀಕರ ತಿಳುವಳಿಕೆಯಲ್ಲಿ ನಡೆದಿದೆ ಎಂಬುದು ಸ್ಪಷ್ಟವಾಗಿ ಕಂಡುಬಂದಿರುತ್ತದೆ. ಈ ಬಗ್ಗೆ ಪ್ರತಿವಾದಿಯಾಗಲೀ, ಅವರ ಪರ ವಕೀಲರಾಗಲೀ, ವಾಹನ ಮಾಲೀಕರ ತಿಳುವಳಿಕೆಯಲ್ಲಿ ಈ ಕೃತ್ಯ ನಡೆದಿರುವುದಿಲ್ಲ ಎಂಬುದರ ಬಗ್ಗೆ ವಾಹನ ಮಾಲೀಕರು ತನ್ನ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಇದುವರೆವಿಗೂ ಈ ಪ್ರಾಧಿಕಾರದ ಮುಂದೆ ಹಾಜರಾಗಿ ತನ್ನ ನಿಲುವು ಏನೆಂಬುದನ್ನು ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ. ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (12) ತಿಂಗಳಿಗೂ ಹೆಚ್ಚು ಕಾಲ ಕಳೆದಿರುತ್ತದೆ. ಜಪ್ತಿಯಾದ ವಾಹನವನ್ನು ಮಧ್ಯಂತರ ಬಿಡುಗಡೆಗಾಗಿ ವಕೀಲರ ಮುಖೇನ ಅರ್ಜಿಯನ್ನು ಸಲ್ಲಿಸಲಾಗಿದ್ದು, ವಾಹನ ಬಿಡುಗಡೆಗಾಗಿ ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆದಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಆಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ/ ಏಜೆಂಟರ್ ಗಮನಕ್ಕೆ ಬಾರದೆ ಮತ್ತು ಅವರುಗಳು ಶಾಮೀಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೆ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/580/2008–09, ದಿನಾಂಕ:11ನೇ ಮಾರ್ಚ್, 2010**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ) ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಆರಕ್ಷಕ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ವಿಭಾಗ, ವಿಶೇಷ ಪೊಲೀಸ್ ಠಾಣೆ, ಮೈಸೂರು ಜಿಲ್ಲೆ ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:51/2009, ದಿನಾಂಕ:16.02.2009 ರಂದು ವಶಪಡಿಸಿಕೊಂಡ ಕೆಎ–09/ಇಎಂ–8119 ನೋಂದಣಿ ಸಂಖ್ಯೆಯ ಟಿವಿಎಸ್ ಎಕ್ಸೆಲ್ ಸೂಪರ್ ಹೆವಿ ಡ್ಯೂಟಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2010ನೇ ಇಸವಿ ಮಾರ್ಚ್ ತಿಂಗಳ 11ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಖ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

**ಡಾ॥ ವೈ. ಮಂಜುನಾಥ್**
ಡೆಪ್ಯೂಟಿ ಕಮೀಷನರ್ ಎಕ್ಸೈಜ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್.526

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್:388/2008–09, ದಿನಾಂಕ:11ನೇ ಮಾರ್ಚ್, 2010**

**ಉಪಸ್ಥಿತರು: ಡಾ॥ ವೈ. ಮಂಜುನಾಥ್,**

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ/ ಆರೋಪಿ** |
|---|---|---|
| ಆರಕ್ಷಕ ಉಪ ನಿರೀಕ್ಷಕರು, ನಜರ್‌ಬಾದ್ ಪೊಲೀಸ್ ಠಾಣೆ, ಮೈಸೂರು. | | ಸುರೇಶ್ ಬಿನ್ ಕೃಷ್ಣಯ್ಯ |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:06.11.2008ರಂದು ಬೆಳಿಗ್ಗೆ 12.15 ಗಂಟೆ ಸಮಯದಲ್ಲಿ ಆರಕ್ಷಕ ಉಪ ನಿರೀಕ್ಷಕರು, ಮೈಸೂರು ನಗರದ, ನಜರ್‌ಬಾದ್ ಪೊಲೀಸ್ ಠಾಣೆ ಸರಹದ್ದಿನ ಇವರು ಮೈಸೂರು ನಗರ, ಬನ್ನೂರು–ಮೈಸೂರು ರಸ್ತೆಯ, ಯರಗನಹಳ್ಳಿ ಹತ್ತಿರ ಕೆಎ–09/ಇಎ–8177 ನೋಂದಣಿ ಸಂಖ್ಯೆಯ ಹೀರೊ ಹೊಂಡಾ ಸ್ಪ್ಲೆಂಡರ್ ವಾಹನದಲ್ಲಿ ಅಕ್ರಮವಾಗಿ 6.300 ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಮದ್ಯವನ್ನು ಜಪ್ತುಗೊಳಿಸಿ, ಆರೋಪಿಯಾದ ಸುರೇಶ್ ಬಿನ್ ಕೃಷ್ಣಯ್ಯ ಎಂಬುವವನನ್ನು ದಸ್ತಗಿರಿ ಮಾಡಿರುವುದಾಗಿ ಮೊಕದ್ದಮೆ ಸಂಖ್ಯೆ: 299/2008ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 32, 34, 35ರ ರೀತ್ಯಾ ಮೊಕದ್ದಮೆ ದಾಖಲಿಸಿ, ಜಪ್ತುಪಡಿಸಲಾದ ವಾಹನ ಮತ್ತು ಮದ್ಯವನ್ನು ಅಬಕಾರಿ ಇಲಾಖೆಗೆ ಹಸ್ತಾಂತರಿಸಲು ದಿನಾಂಕ:22.01.2009 ರಂದು ಈ ಪ್ರಾಧಿಕಾರದ ಅನುಮತಿಗಾಗಿ ಕೋರಿರುತ್ತಾರೆ. ಅಂತೆಯೇ ದಿನಾಂಕ:31.01.2009ರಂದು ಮೈಸೂರು ವಲಯ–1ರ ಅಬಕಾರಿ ನಿರೀಕ್ಷಕರಿಗೆ ಹಸ್ತಾಂತರಿಸಲು ಅನುಮತಿ ನೀಡಲಾಗಿರುತ್ತದೆ.

ವಶಪಡಿಸಿಕೊಂಡ ವಾಹನದ ಮಾಲೀಕತ್ವದ ವಿವರವುಳ್ಳ 'ಬಿ' ವಹಿಯ ಪ್ರತಿಯನ್ನು ಕೋರಿ, ಮೈಸೂರು ಜಿಲ್ಲೆಯ ಪೂರ್ವ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ದಿನಾಂಕ:12.02.2009ರಂದು ಈ ಪ್ರಾಧಿಕಾರದಿಂದ ಪತ್ರ ಬರೆಯಲಾಗಿರುತ್ತದೆ. ಇದೂವರೆವಿಗೂ ಯಾವುದೇ ಪ್ರತಿಕ್ರಿಯೆ ಇರುವುದಿಲ್ಲ.

ವಾಹನದ ಮಾಲೀಕರಾದ ಕುಮಾರ್ ಬಿನ್ ಹೆಚ್. ಸೀರಯ್ಯ, ಚಿಕ್ಕ ಅಂಕನಹಳ್ಳಿ, ಕಸಬಾ ಹೋಬಳಿ, ಶ್ರೀರಂಗಪಟ್ಟಣ ತಾಲ್ಲೂಕು ಇವರು ತಮ್ಮ ಪರ ವಕೀಲ ಮುಖೇನ ದಿನಾಂಕ:10.12.2008ರಂದು ವಕಾಲತ್ತಿನೊಂದಿಗೆ ಅರ್ಜಿ ಸಲ್ಲಿಸಿ ಜಪ್ತುಪಡಿಸಲಾದ ಹೀರೊ ಹೊಂಡಾ ಸ್ಪ್ಲೆಂಡರ್ ಸಂಖ್ಯೆ: ಕೆಎ–09/ಇಎ–8177 ವಾಹನವನ್ನು ತಮ್ಮ ಮಧ್ಯಂತರ ಸುಪರ್ದಿಗೆ ಬಿಡುಗಡೆ ಮಾಡಬೇಕೆಂದು ಕೋರಿರುತ್ತಾರೆ.

ಅರ್ಜಿದಾರರು ಸಲ್ಲಿಸಿರುವ ದಾಖಲೆಗಳಂತೆ ಸದರಿ ವಾಹನವು ಕುಮಾರ್ ಬಿನ್ ಹೆಚ್.ಸೀರಯ್ಯ, ನಂ.2368, ಎರಕಟ್ಟೆ ಬೀದಿ, ಲಷ್ಕರ್ ಮೊಹಲ್ಲಾ, ಮೈಸೂರು, ಇವರ ಒಡೆತನದಲ್ಲಿದ್ದು, ವಿಳಾಸವು ಒಂದಕ್ಕೊಂದು ತಾಳೆಯಾಗಿರುವುದಿಲ್ಲ. ಇದು ಸಂಶಯಕ್ಕೆ ಆಸ್ಪದ ನೀಡಿದಂತಾಗಿರುತ್ತದೆ. ಅಲ್ಲದೆ ದಿನಾಂಕ:30.01.2009ರಂದು ವಕೀಲರು ಮೆಮೋ ಸಲ್ಲಿಸಿ ಅರ್ಜಿದಾರರು ಈ ಪ್ರಕರಣದಲ್ಲಿ ಬೇರೆ ವಕೀಲರನ್ನು ನೇಮಿಸಿಕೊಳ್ಳಲು ತನ್ನ ಯಾವುದೇ ಅಭ್ಯಂತರವಿಲ್ಲವೆಂದು ತಿಳಿಸಿರುತ್ತಾರೆ.

ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ದಿನಾಂಕ:06.11.2008ರಂದು ಮೈಸೂರುನಗರ, ಬನ್ನೂರು–ಮೈಸೂರು ರಸ್ತೆಯ, ಯರಗನಹಳ್ಳಿಯ ಹತ್ತಿರದಲ್ಲಿ ಕೆಎ–09/ಇಎ–8177 ನೋಂದಣಿ ಸಂಖ್ಯೆಯ ಹೀರೊ ಹೊಂಡಾ ಸ್ಪ್ಲೆಂಡರ್ ವಾಹನದಲ್ಲಿ ಅಕ್ರಮವಾಗಿ 6.300 ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಪ್ರಕರಣದಲ್ಲಿ ಸುರೇಶ್ ಎಂಬ ಆರೋಪಿಯನ್ನು ದಸ್ತಗಿರಿ ಮಾಡಲಾಗಿರುತ್ತದೆ. ವಾಹನ ಮಾಲೀಕರು ತನ್ನ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಹಾಗೂ ಈ ಕೃತ್ಯವು ತನ್ನ ತಿಳುವಳಿಕೆಯಲ್ಲಿ ನಡೆದಿಲ್ಲ ಎಂಬುದರ ಬಗ್ಗೆ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಯಾವುದೇ ಸಾಕ್ಷ್ಯಾಧಾರಗಳನ್ನು ರುಜುವಾತುಪಡಿಸಿರುವುದಿಲ್ಲ. ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು 15 ತಿಂಗಳಿಗೂ ಹೆಚ್ಚು ಕಾಲ ಕಳೆದಿರುತ್ತದೆ. ಜಪ್ತಿಯಾದ ವಾಹನವನ್ನು ಮಧ್ಯಂತರ ಬಿಡುಗಡೆಗಾಗಿ ವಕೀಲರ ಮುಖೇನ

ಅರ್ಜಿಯನ್ನು ಸಲ್ಲಿಸಲಾಗಿದ್ದು, ವಾಹನ ಬಿಡುಗಡೆಗಾಗಿ ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆದಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಆಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ/ ಏಜೆಂಟರ್ ಗಮನಕ್ಕೆ ಬಾರದೆ ಮತ್ತು ಅವರುಗಳು ಶಾಮೀಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೆ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/388/2008–09, ದಿನಾಂಕ:11ನೇ ಮಾರ್ಚ್, 2010**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ)ರ ಪ್ರಕಾರ ಅನುಸರಿಸಬೇಕಾದ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43(ಎ) (2) ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಆರಕ್ಷಕ ಉಪ ನಿರೀಕ್ಷಕರು, ನಜರ್‌ಬಾದ್ ಪೊಲೀಸ್ ಠಾಣೆ, ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:298/2008, ದಿನಾಂಕ:06.11.2008 ರಂದು ವಶಪಡಿಸಿಕೊಂಡ ಕೆಎ–09/ಇಎ–8177 ನೋಂದಣಿ ಸಂಖ್ಯೆಯ ಹೀರೊ ಹೊಂಡಾ ಸ್ಪ್ಲೆಂಡರ್ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2010ನೇ ಇಸವಿ ಮಾರ್ಚ್ ತಿಂಗಳ 11ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಖ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

**ಡಾ॥ ವೈ. ಮಂಜುನಾಥ್**
ಡೆಪ್ಯೂಟಿ ಕಮೀಷನರ್ ಎಕ್ಸೈಜ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್.527

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್:33/2008–09, ದಿನಾಂಕ:25ನೇ ಫೆಬ್ರವರಿ, 2010**

**ಉಪಸ್ಥಿತರು: ಡಾ॥ ವೈ. ಮಂಜುನಾಥ್,**
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ/ ಆರೋಪಿ** |
|---|---|---|
| ಆರಕ್ಷಕ ಉಪ ನಿರೀಕ್ಷಕರು,<br>ಪಿರಿಯಾಪಟ್ಟಣ ಪೊಲೀಸ್ ಠಾಣೆ,<br>ಪಿರಿಯಾಪಟ್ಟಣ. | | ಮಹೇಶ್ ಮತ್ತು ಇತರರು. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:26.06.2008ರಂದು ಸಂಜೆ 5:15 ಗಂಟೆ ಸಮಯದಲ್ಲಿ ಆರಕ್ಷಕ ಉಪ ನಿರೀಕ್ಷಕರು, ಪಿರಿಯಾಪಟ್ಟಣ ಪೊಲೀಸ್ ಠಾಣೆ ಇವರು ಪಿರಿಯಾಪಟ್ಟಣ ತಾಲ್ಲೂಕು, ಗೋಣಿಕೊಪ್ಪ–ಪಿರಿಯಾಪಟ್ಟಣ ರಸ್ತೆಯ, ಸೆಂಟ್ ಮೇರಿಸ್ ಹಾಸ್ಪಿಟಲ್ ಮುಂಭಾಗ ಕೆಎ–05/ಡಿ–5668 ನೋಂದಣಿ ಸಂಖ್ಯೆಯ ಅಂಬಾಸಿಡರ್ ಕಾರ್ ವಾಹನದಲ್ಲಿ ಅಕ್ರಮವಾಗಿ 155.520 ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಮದ್ಯವನ್ನು ಜಪ್ತುಗೊಳಿಸಿ, ಪ್ರಥಮ ಮಾಹಿತಿ ವರದಿ ಸಂಖ್ಯೆ:119/2008ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11, 14, 32, 34, 38(ಎ)ರ ರೀತ್ಯಾ ಮೊಕದ್ದಮೆ ದಾಖಲಿಸಿ, ಜಪ್ತುಪಡಿಸಲಾದ ವಾಹನ ಮತ್ತು ಮದ್ಯವನ್ನು ಮುಂದಿನ ಕ್ರಮಕ್ಕಾಗಿ ಅಬಕಾರಿ ಇಲಾಖೆಗೆ ಹಸ್ತಾಂತರಿಸಲು ದಿನಾಂಕ:11.07.2008 ರಂದು ಅನುಮತಿಗಾಗಿ ಕೋರಿರುತ್ತಾರೆ. ಅಂತೆಯೇ ದಿನಾಂಕ:15.07.2008ರಂದು ಪಿರಿಯಾಪಟ್ಟಣ ವಲಯ ಅಬಕಾರಿ ನಿರೀಕ್ಷಕರಿಗೆ ಹಸ್ತಾಂತರಿಸಲು ಅನುಮತಿ ನೀಡಲಾಗಿರುತ್ತದೆ.

ವಾಹನದ ಮಾಲೀಕರಾದ ಮಹೇಶ ಬಿನ್ ಶಾರದಮ್ಮ, ಪಿರಿಯಾಪಟ್ಟಣ ತಾಲ್ಲೂಕು ಇವರ ಪರ ವಕೀಲರಾದ ಎನ್. ಕರುಣಾಕರ ಇವರು ದಿನಾಂಕ:22.07.2008ರಂದು ವಕಾಲತ್ತಿನೊಂದಿಗೆ ಅರ್ಜಿ ಸಲ್ಲಿಸಿ ಜಪ್ತುಪಡಿಸಲಾದ ಅಂಬಾಸಿಡರ್ ಕಾರ್ ವಾಹನವನ್ನು ತಮ್ಮ ಮಧ್ಯಂತರ ಸುಪರ್ದಿಗೆ ಬಿಡುಗಡೆ ಮಾಡಬೇಕೆಂದು ಕೋರಿರುತ್ತಾರೆ.

ಅರ್ಜಿದಾರರು ಸಲ್ಲಿಸಿರುವ ವಾಹನ ದಾಖಲೆಗಳಂತೆ ಮಹೇಶ್ ಬಿನ್ ಶಾರದಮ್ಮ, ಹರವೆ, ಮಲ್ಲರಾಜಪಟ್ಟಣ, ಪಿರಿಯಾಪಟ್ಟಣ ತಾಲ್ಲೂಕು, ಇವರ ಹೆಸರಿಗೆ ದಿನಾಂಕ:16.08.2007ರಂದು ಮಾಲೀಕತ್ವವು ನೋಂದಣಿಯಾಗಿದ್ದು, ಸದರಿ ವಾಹನ ಮಾಲೀಕರಿಗೆ ಕಲಂ 43(ಬಿ)ರ ಅಡಿಯಲ್ಲಿ ಕಾರಣ ಕೇಳುವ ನೋಟೀಸನ್ನು ಈ ಪ್ರಾಧಿಕಾರದಿಂದ ದಿನಾಂಕ:12.08.2008ರಂದು ಜಾರಿಗೊಳಿಸಲಾಗಿರುತ್ತದೆ.

ವಶಪಡಿಸಿಕೊಂಡ ವಾಹನದ ಮಾಲೀಕತ್ವದ ವಿವರವುಳ್ಳ 'ಬಿ' ವಹಿಯ ಕೋರಿ, ಹುಣಸೂರು ತಾಲ್ಲೂಕು ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ದಿನಾಂಕ:05.11.2008ರಂದು ಈ ಪ್ರಾಧಿಕಾರದಿಂದ ಪತ್ರ ಬರೆಯಲಾಗಿರುತ್ತದೆ. ಅದರಂತೆ 'ಬಿ' ವಹಿಯ ಪ್ರತಿಯನ್ನು ಈ ಪ್ರಾಧಿಕಾರಕ್ಕೆ ಕಳುಹಿಸಿರುತ್ತಾರೆ. ಅದನ್ನು ಪರಿಶೀಲಿಸಲಾಗಿ ಮಹೇಶ್ ಬಿನ್ ಶಾರದಮ್ಮ, ಹರವೆ, ಮಲ್ಲರಾಜಪಟ್ಟಣ, ಪಿರಿಯಾಪಟ್ಟಣ ತಾಲ್ಲೂಕು ಇವರ ಹೆಸರಿಗೆ ಒಡೆತನದಲ್ಲಿರುವುದು ಕಂಡುಬಂದಿರುತ್ತದೆ.

ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ದಿನಾಂಕ:26.06.2008ರಂದು ಪಿರಿಯಾಪಟ್ಟಣ ತಾಲ್ಲೂಕು, ಗೋಣಿಕೊಪ್ಪ–ಪಿರಿಯಾಪಟ್ಟಣ ರಸ್ತೆಯ, ಸೆಂಟ್ ಮೇರಿಸ್ ಹಾಸ್ಪಿಟಲ್ ಮುಂಭಾಗ, ಕೆಎ–05/ಡಿ–5668 ನೋಂದಣಿ ಸಂಖ್ಯೆಯ ಅಂಬಾಸಿಡರ್ ಕಾರ್ ವಾಹನದಲ್ಲಿ ಅಕ್ರಮವಾಗಿ 155.520 ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಸಂದರ್ಭದಲ್ಲಿ ಆರೋಪಿ ಮಹೇಶ್ ಮತ್ತು ಇತರರನ್ನು ದಸ್ತಗಿರಿಗೊಳಿಸಲಾಗಿರುತ್ತದೆ. ವಾಹನಕ್ಕೆ ಸಂಬಂಧಪಟ್ಟ ಆರೋಪಿಗಳಾಗಲೀ/ ವಾಹನ ಮಾಲೀಕರಾಗಲೀ ತಮ್ಮ ನಿಲುವು ಏನೆಂಬುದನ್ನು ಮತ್ತು ಮಾಲೀಕರ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಪ್ರಾಧಿಕಾರದ ಮುಂದೆ ಹಾಜರಾಗಿ ಇದುವರೆವಿಗೂ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು 19 ತಿಂಗಳಿಗೂ ಹೆಚ್ಚು ಕಾಲ ಕಳೆದಿರುತ್ತದೆ. ಮೇಲ್ಕಂಡ ವಾಹನದ ಮಧ್ಯಂತರ ಬಿಡುಗಡೆಗಾಗಿ ಮಹೇಶ್ ಬಿನ್ ಶಾರದಮ್ಮ ಇವರು ತನ್ನ ವಕೀಲರೊಂದಿಗೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಈ ಪ್ರಕರಣವು ದಿನಾಂಕ:26.06.2008ರಂದು ಸಂಭವಿಸಿದ್ದು, ಆ ಸಂದರ್ಭದಲ್ಲಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ನೀಡಿರುವ 'ಬಿ' ವಹಿಯಂತೆ ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಆಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ/ ಏಜೆಂಟರ್ ಗಮನಕ್ಕೆ ಬಾರದೆ ಮತ್ತು ಅವರುಗಳು ಶಾಮೀಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೆ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/33/2008–09, ದಿನಾಂಕ:25ನೇ ಫೆಬ್ರವರಿ, 2010**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ)ರ ಪ್ರಕಾರ ಅನುಸರಿಸಬೇಕಾದ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43(ಎ) (2) ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಆರಕ್ಷಕ ಉಪ ನಿರೀಕ್ಷಕರು, ಪಿರಿಯಾಪಟ್ಟಣ ಪೊಲೀಸ್ ಠಾಣೆ, ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:119/2008, ದಿನಾಂಕ:26.06.2008 ರಂದು ವಶಪಡಿಸಿಕೊಂಡ ಕೆಎ–05/ಡಿ–5668 ನೋಂದಣಿ ಸಂಖ್ಯೆಯ ಅಂಬಾಸಿಡರ್ ಕಾರ್ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2010ನೇ ಇಸವಿ ಫೆಬ್ರವರಿ ತಿಂಗಳ 25ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಖ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

**ಡಾ॥ ವೈ. ಮಂಜುನಾಥ್**
ಡೆಪ್ಯೂಟಿ ಕಮೀಷನರ್ ಎಕ್ಸೈಜ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್.528

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್:302/2007–08, ದಿನಾಂಕ:25ನೇ ಫೆಬ್ರವರಿ, 2010**

**ಉಪಸ್ಥಿತರು: ಡಾ॥ ವೈ. ಮಂಜುನಾಥ್,**

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್

ಹಾಗೂ ಅಧಿಕೃತ ಅಧಿಕಾರಿಗಳು,

ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ/ ಆರೋಪಿ** |
|---|---|---|
| ಅಬಕಾರಿ ಉಪ ನಿರೀಕ್ಷಕರು, ಮೈಸೂರು ಉಪವಿಭಾಗ, ಮೈಸೂರು. | | ಚಂದ್ರಶೇಖರ್, ರಾಜು, ಮಹದೇವ್. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:14.04.2008ರಂದು ಮಧ್ಯಾಹ್ನ 1.00 ಗಂಟೆ ಸಮಯದಲ್ಲಿ ಅಬಕಾರಿ ಉಪ ನಿರೀಕ್ಷಕರು, ಮೈಸೂರು ಉಪವಿಭಾಗ, ಮೈಸೂರು ಇವರು ಮೈಸೂರು ಸಿಟಿ, ಮಹದೇವಪುರ ರಿಂಗ್ ರಸ್ತೆ ಸರ್ಕಲ್ ಬಳಿ ಸಿಕೆಎನ್–3095 ನೋಂದಣಿ ಸಂಖ್ಯೆಯ ಮಾರುತಿ ವ್ಯಾನ್ ವಾಹನದಲ್ಲಿ ಅಕ್ರಮವಾಗಿ 20.000 ಲೀ. ಮದ್ಯಸಾರವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಮದ್ಯಸಾರವನ್ನು ಜಪ್ತುಗೊಳಿಸಿ, ಪ್ರಥಮ ಮಾಹಿತಿ ವರದಿ ಸಂಖ್ಯೆ:02/2007–08ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11, 14ರ ರೀತ್ಯಾ ಅಪರಾಧವಾಗಿದ್ದು ವಿಧಿ 32, 38(ಎ) ಹಾಗೂ 43ರ ರೀತ್ಯಾ ಶಿಕ್ಷಾರ್ಹವಾದ್ದರಿಂದ ಮಹದೇವ ಬಿನ್ ಮಾದೇಗೌಡ ಎಂಬ ಆರೋಪಿಯನ್ನು ದಸ್ತಗಿರಿ ಮಾಡಿರುವುದಾಗಿ ಮೊಕದ್ದಮೆ ದಾಖಲಿಸಿ, ಮುಂದಿನ ಕ್ರಮಕ್ಕಾಗಿ ದಾಖಲಾತಿಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ವಾಹನದ ಮಾಲೀಕರಾದ ಚಂದ್ರಶೇಖರ ವಿ. ಬಿನ್ ಲೇ: ವೆಂಕಟರಾಜು, ಹೆಚ್.ಎಂ. ಪಟ್ಟಣ, ಪಿರಿಯಾಪಟ್ಟಣ ತಾಲ್ಲೂಕು ಇವರ ಪರ ವಕೀಲರಾದ ಆರ್. ಸರಸ್ವತಿ ಇವರು ದಿನಾಂಕ:05.05.2008ರಂದು ವಕಾಲತ್ತಿನೊಂದಿಗೆ ಅರ್ಜಿ ಸಲ್ಲಿಸಿ ಜಪ್ತುಪಡಿಸಲಾದ ಮಾರುತಿ ವ್ಯಾನ್ ವಾಹನವನ್ನು ತಮ್ಮ ಮಧ್ಯಂತರ ಸುಪರ್ದಿಗೆ ಬಿಡುಗಡೆ ಮಾಡಬೇಕೆಂದು ಕೋರಿರುತ್ತಾರೆ.

ವಶಪಡಿಸಿಕೊಂಡ ವಾಹನದ ಮಾಲೀಕತ್ವದ ವಿವರವುಳ್ಳ 'ಬಿ' ವಹಿಯನ್ನು ಕೋರಿ, ಮೈಸೂರು ಜಿಲ್ಲೆಯ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ದಿನಾಂಕ:05.11.2008ರಂದು ಈ ಪ್ರಾಧಿಕಾರದಿಂದ ಪತ್ರ ಬರೆಯಲಾಗಿರುತ್ತದೆ. ಆದರೆ ಇದೂವರೆವಿಗೂ ಯಾವುದೇ ಪ್ರತಿಕ್ರಿಯೆ ಇರುವುದಿಲ್ಲ.

ಸದರಿ ವಾಹನ ಮಾಲೀಕರಿಗೆ ಈ ಪ್ರಾಧಿಕಾರದಿಂದ ದಿನಾಂಕ:10.07.2008ರಂದು ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ಕಲಂ 43(ಬಿ)ರ ಅಡಿಯಲ್ಲಿ ಕಾರಣ ಕೇಳುವ ನೋಟೀಸನ್ನು ನೋಂದಣಿ ಅಂಚೆ ಮೂಲಕ ಕಳುಹಿಸಲಾಗಿದ್ದು, ಸದರಿ ನೋಟಿಸ್ ಸಂಬಂಧಪಟ್ಟವರಿಗೆ ಜಾರಿಯಾಗಿ ದಿನಾಂಕ:01.08.2008 ರಂದು ಸ್ವೀಕೃತಿಯು ಈ ಪ್ರಾಧಿಕಾರಕ್ಕೆ ಸ್ವೀಕೃತಿಯಾಗಿರುತ್ತದೆ.

ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ದಿನಾಂಕ:14.04.2008ರಂದು ಮೈಸೂರು ಸಿಟಿ, ಮಹದೇವಪುರ ರಿಂಗ್ ರಸ್ತೆ ಸರ್ಕಲ್ ಬಳಿ ಸಿಕೆಎನ್–3095 ನೋಂದಣಿ ಸಂಖ್ಯೆಯ ಮಾರುತಿ ವ್ಯಾನ್ ವಾಹನದಲ್ಲಿ ಅಕ್ರಮವಾಗಿ 20.000 ಲೀ. ಮದ್ಯಸಾರವನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಸಂದರ್ಭದಲ್ಲಿ ಆರೋಪಿ ಮಹದೇವ್ ಮತ್ತು ಇತರರನ್ನು ದಸ್ತಗಿರಿಗೊಳಿಸಲಾಗಿರುತ್ತದೆ. ವಾಹನಕ್ಕೆ ಸಂಬಂಧಪಟ್ಟ ಆರೋಪಿಗಳಾಗಲೀ/ ವಾಹನ ಮಾಲೀಕರಾಗಲೀ ತಮ್ಮ ನಿಲುವು ಏನೆಂಬುದನ್ನು ಮತ್ತು ಮಾಲೀಕರ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಪ್ರಾಧಿಕಾರದ ಮುಂದೆ ಹಾಜರಾಗಿ ಇದುವರೆವಿಗೂ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ. ಹಾಗೂ ವಾಹನ ಬಿಡುಗಡೆಗಾಗಿ ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆಸಿರುವುದಿಲ್ಲ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು 20 ತಿಂಗಳಿಗೂ ಹೆಚ್ಚು ಕಾಲ ಕಳೆದಿರುತ್ತದೆ. ವಾಹನ ಮಧ್ಯಂತರ ಬಿಡುಗಡೆಗಾಗಿ ಅರ್ಜಿದಾರರ ಪರ ವಕೀಲರು ಮನವಿಯನ್ನು ಸಲ್ಲಿಸಲಾಗಿದ್ದು, ಅವರು ಸಲ್ಲಿಸಿರುವ ದಾಖಲೆಗಳಂತೆ ವಾಹನ ಮಾಲೀಕರಾದ ಚಂದ್ರಶೇಖರ್ ವಿ. ಬಿನ್ ಲೇ: ವೆಂಕಟರಾಜು, ಹೆಚ್.ಎಂ. ಪಟ್ಟಣ, ಪಿರಿಯಾಪಟ್ಟಣ ತಾಲ್ಲೂಕು, ವಾಹನವು ಇವರ ಒಡೆತನದಲ್ಲಿದ್ದು, ಸದರಿಯವರಿಗೆ ಈ ಪ್ರಾಧಿಕಾರದಿಂದ ಕಾರಣ ಕೇಳುವ ನೋಟೀಸನ್ನು ನೀಡಲಾಗಿದ್ದು ಅದು ಜಾರಿಯಾಗಿದ್ದರೂ ಸಹ ಇದೂವರೆವಿಗೂ ಅವರಿಂದ ಯಾವುದೇ ಪ್ರತಿಕ್ರಿಯೆ ಇರುವುದಿಲ್ಲ. ವಾಹನ ಬಿಡುಗಡೆಗಾಗಿ

ಅರ್ಜಿಯನ್ನು ಸಲ್ಲಿಸಿರುವುದನ್ನು ಹೊರತುಪಡಿಸಿ ವಾಹನ ಬಿಡುಗಡೆಗಾಗಿ ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆದಿರುವುದಿಲ್ಲ. ವಾಹನ ಮಾಲೀಕರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಅಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ/ ಏಜೆಂಟರ್ ಗಮನಕ್ಕೆ ಬಾರದೆ ಮತ್ತು ಅವರುಗಳು ಶಾಮೀಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೆ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/302/2007–08, ದಿನಾಂಕ:25ನೇ ಫೆಬ್ರವರಿ, 2010**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ)ರ ಪ್ರಕಾರ ಅನುಸರಿಸಬೇಕಾದ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43(ಎ) (2) ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬಕಾರಿ ಉಪ ನಿರೀಕ್ಷಕರು, ಮೈಸೂರು ಉಪವಿಭಾಗ ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:02/2007–08, ದಿನಾಂಕ:14.04.2008 ರಂದು ವಶಪಡಿಸಿಕೊಂಡ ಸಿಕೆಎನ್–3093 ನೋಂದಣಿ ಸಂಖ್ಯೆಯ ಮಾರುತಿ ವ್ಯಾನ್ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2010ನೇ ಇಸವಿ ಫೆಬ್ರವರಿ ತಿಂಗಳ 25ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಖ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

**ಡಾ॥ ವೈ. ಮಂಜುನಾಥ್**
ಡೆಪ್ಯೂಟಿ ಕಮೀಷನರ್ ಎಕ್ಸೈಜ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್.529

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್:224/2008–09, ದಿನಾಂಕ:25ನೇ ಫೆಬ್ರವರಿ, 2010**

**ಉಪಸ್ಥಿತರು: ಡಾ॥ ವೈ. ಮಂಜುನಾಥ್,**
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ದ** | **ಪ್ರತಿವಾದಿ/ ಆರೋಪಿ** |
|---|---|---|
| ಆರಕ್ಷಕ ಉಪ ನಿರೀಕ್ಷಕರು,<br>ಲಷ್ಕರ್ ಪೊಲೀಸ್ ಠಾಣೆ, ಮೈಸೂರು. | | ಮಾದೇಶ್ ಬಿನ್ ಮಂಚಯ್ಯ |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:13.10.2008ರಂದು ಬೆಳಿಗ್ಗೆ 11.15 ಗಂಟೆ ಸಮಯದಲ್ಲಿ ಆರಕ್ಷಕ ನಿರೀಕ್ಷಕರು, ಅಬಕಾರಿ ಮತ್ತು ಲಾಟರಿ ನಿಷೇಧ ವಿಭಾಗ, ಮೈಸೂರು ನಗರ ಇವರು ಮೈಸೂರು ನಗರ, ಹರ್ಷ ರಸ್ತೆಯಲ್ಲಿರುವ ಉಡ್‌ಲ್ಯಾಂಡ್ ಚಿತ್ರಮಂದಿರದ ಬಳಿ ಕೆಎ–09/ಇಹೆಚ್–8435 ನೋಂದಣಿ ಸಂಖ್ಯೆಯ ಹೀರೊ ಹೊಂಡಾ ಫ್ಯಾಷನ್ ವಾಹನದಲ್ಲಿ ಅಕ್ರಮವಾಗಿ 5.400 ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಮದ್ಯವನ್ನು ಜಪ್ತುಗೊಳಿಸಿ, ಆರೋಪಿಯಾದ ಮಾದೇಶ ಬಿನ್ ಲೇ: ಮಂಚಯ್ಯ ಎಂಬುವವನನ್ನು ದಸ್ತಗಿರಿ ಮಾಡಿ ಮುಂದಿನ ಕ್ರಮ ಜರುಗಿಸಲು ಆರಕ್ಷಕ ಉಪ ನಿರೀಕ್ಷಕರು, ಲಷ್ಕರ್ ಪೊಲೀಸ್ ಠಾಣೆ, ಮೈಸೂರು ಇವರಿಗೆ ಹಸ್ತಾಂತರಿಸಲಾಗಿದ್ದು, ಠಾಣಾ ಮೊಕದ್ದಮೆ ಸಂಖ್ಯೆ:219/2008ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 32, 34, 36, 13(ಎಫ್)ರ ರೀತ್ಯಾ ಮೊಕದ್ದಮೆ ದಾಖಲಿಸಿ, ಜಪ್ತುಪಡಿಸಲಾದ ವಾಹನ ಮತ್ತು ಮದ್ಯವನ್ನು ಮುಂದಿನ ಕ್ರಮಕ್ಕಾಗಿ ಅಬಕಾರಿ ಇಲಾಖೆಗೆ ಹಸ್ತಾಂತರಿಸಲು ದಿನಾಂಕ:15.10.2008ರಂದು ಅನುಮತಿಗಾಗಿ

ಕೋರಿರುತ್ತಾರೆ. ಅಂತೆಯೇ ದಿನಾಂಕ:23.10.2008ರಂದು ಮೈಸೂರು ವಲಯ–1 ಅಬಕಾರಿ ನಿರೀಕ್ಷಕರಿಗೆ ಹಸ್ತಾಂತರಿಸಲು ಅನುಮತಿ ನೀಡಲಾಗಿರುತ್ತದೆ.

ವಾಹನದ ಮಾಲೀಕರಾದ ಮಹದೇವ ಬಿನ್ ಜವರಪ್ಪ, ನಂ.205, ರಮ್ಮನಹಳ್ಳಿ, ಮೈಸೂರು ತಾಲ್ಲೂಕು ಇವರ ಪರ ವಕೀಲರಾದ ರಘು ಟಿ.ಜೆ. ಮೈಸೂರು ಇವರು ದಿನಾಂಕ:23.10.2008ರಂದು ವಕಾಲತ್ತಿನೊಂದಿಗೆ ಅರ್ಜಿ ಸಲ್ಲಿಸಿ ಜಪ್ತುಪಡಿಸಲಾದ ಹೀರೋಹೊಂಡಾ ಫ್ಯಾಷನ್ ವಾಹನವನ್ನು ತಮ್ಮ ಮಧ್ಯಂತರ ಸುಪರ್ದಿಗೆ ಬಿಡುಗಡೆ ಮಾಡಬೇಕೆಂದು ಕೋರಿರುತ್ತಾರೆ.

ವಶಪಡಿಸಿಕೊಂಡ ವಾಹನದ ಮಾಲೀಕತ್ವದ ವಿವರವುಳ್ಳ 'ಬಿ' ವಹಿಯನ್ನು ಕೋರಿ, ಮೈಸೂರು ಪೂರ್ವ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ದಿನಾಂಕ:23.10.2008ರಂದು ಈ ಪ್ರಾಧಿಕಾರದಿಂದ ಪತ್ರ ಬರೆಯಲಾಗಿರುತ್ತದೆ. ಆದರೆ ಇದೂವರೆವಿಗೂ ಯಾವುದೇ ಪ್ರತಿಕ್ರಿಯೆ ಬಂದಿರುವುದಿಲ್ಲ. ವಾಹನ ನೋಂದಣಿ ಪುಸ್ತಕದ ನಕಲಿ ಪ್ರತಿಯನ್ವಯ ಸದರಿ ವಾಹನ ಮಾಲೀಕರಾದ ಮಹದೇವ ಬಿನ್ ಜವರಪ್ಪ, ನಂ.205, ರಮ್ಮನಹಳ್ಳಿ, ಮೈಸೂರು ತಾ: ಇವರಿಗೆ ಈ ಪ್ರಾಧಿಕಾರದಿಂದ ದಿನಾಂಕ:28.04.2009ರಂದು ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ಕಲಂ 43(ಬಿ)ರ ಅಡಿಯಲ್ಲಿ ಕಾರಣ ಕೇಳುವ ನೋಟೀಸ್‌ನ್ನು ನೋಂದಣಿ ಅಂಚೆ ಮೂಲಕ ಕಳುಹಿಸಲಾಗಿದ್ದು, ಸದರಿ ನೋಟೀಸ್ ಸಂಬಂಧಪಟ್ಟವರಿಗೆ ಜಾರಿಯಾಗದೆ ಪೂರ್ಣ ವಿಳಾಸ ಇಲ್ಲವೆಂದು ಅಂಚೆ ಇಲಾಖೆಯವರು ಈ ಪ್ರಾಧಿಕಾರಕ್ಕೆ ಹಿಂತಿರುಗಿಸಿರುತ್ತಾರೆ. ಮೈಸೂರು ವಲಯ ಅಬಕಾರಿ ನಿರೀಕ್ಷಕರು ಸದರಿ ನೋಟೀಸನ್ನು ಮಹದೇವ್ ಬಿನ್ ಜವರಪ್ಪ ಇವರಿಗೆ ದಿನಾಂಕ:14.05.2009ರಂದು ಖುದ್ದಾಗಿ ಭೇಟಿ ಮಾಡಿ ಈ ಪ್ರಾಧಿಕಾರಕ್ಕೆ ವರದಿ ಮಾಡಿರುತ್ತಾರೆ.

ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ದಿನಾಂಕ:13.10.2008ರಂದು ಮೈಸೂರುನಗರ, ಹರ್ಷ ರಸ್ತೆಯಲ್ಲಿರುವ ಉಡ್‌ಲ್ಯಾಂಡ್ ಚಿತ್ರಮಂದಿರದ ಬಳಿ ಕೆಎ–09/ಇಹೆಚ್–8435 ನೋಂದಣಿ ಸಂಖ್ಯೆಯ ಹೀರೋಹೊಂಡಾ ಫ್ಯಾಷನ್ ವಾಹನದಲ್ಲಿ ಅಕ್ರಮವಾಗಿ 5.400 ಲೀ. ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಸಂದರ್ಭದಲ್ಲಿ ಆರೋಪಿ ಮಾದೇಶ್ ಬಿನ್ ಮಂಚಯ್ಯ ಇವರನ್ನು ದಸ್ತಗಿರಿಗೊಳಿಸಲಾಗಿರುತ್ತದೆ. ವಾಹನಕ್ಕೆ ಸಂಬಂಧಪಟ್ಟ ಆರೋಪಿಗಳಾಗಲೀ/ ವಾಹನ ಮಾಲೀಕರಾಗಲೀ ತಮ್ಮ ನಿಲುವು ಏನೆಂಬುದನ್ನು ಮತ್ತು ಮಾಲೀಕರ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಪ್ರಾಧಿಕಾರದ ಮುಂದೆ ಹಾಜರಾಗಿ ಇದುವರೆವಿಗೂ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ. ಹಾಗೂ ಈ ಪ್ರಾಧಿಕಾರದಿಂದ ನೀಡಲಾದ ಕಾರಣ ಕೇಳಿ ನೋಟೀಸಿಗೆ ಪ್ರತ್ಯುತ್ತರ ನೀಡಿಲ್ಲದೆ ಇರುವುದು ಕಂಡುಬಂದಿರುತ್ತದೆ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು 16 ತಿಂಗಳಿಗೂ ಹೆಚ್ಚು ಕಾಲ ಕಳೆದಿರುತ್ತದೆ. ಜಪ್ತಿಯಾದ ವಾಹನವನ್ನು ಮಧ್ಯಂತರ ಬಿಡುಗಡೆಗಾಗಿ ವಕೀಲ ಮುಖೇನ ಅರ್ಜಿಯನ್ನು ಸಲ್ಲಿಸಲಾಗಿದ್ದು, ಕಾರಣ ಕೇಳುವ ನೋಟಿಸಿಗೆ ಪ್ರತ್ಯುತ್ತರ ನೀಡುವುದಾಗಲಿ ಮತ್ತು ವಾಹನ ಬಿಡುಗಡೆಗಾಗಿ ಯಾವುದೇ ಪ್ರಯತ್ನ ಪ್ರತಿವಾದಿಗಳ ಕಡೆಯಿಂದ ಇದುವರೆಗೂ ನಡೆದಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಅಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ/ ಏಜೆಂಟರ್ ಗಮನಕ್ಕೆ ಬಾರದೆ ಮತ್ತು ಅವರುಗಳು ಶಾಮಿಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೆ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/224/2008–09, ದಿನಾಂಕ:25ನೇ ಫೆಬ್ರವರಿ, 2010**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ)ರ ಪ್ರಕಾರ ಅನುಸರಿಸಬೇಕಾದ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43(ಎ) (2) ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಆರಕ್ಷಕ ಉಪ ನಿರೀಕ್ಷಕರು, ಲಷ್ಕರ್ ಪೊಲೀಸ್ ಠಾಣೆ ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:219/2008, ದಿನಾಂಕ:13.10.2008 ರಂದು ವಶಪಡಿಸಿಕೊಂಡ ಕೆಎ–09/ಇಹೆಚ್–8435 ನೋಂದಣಿ ಸಂಖ್ಯೆಯ ಹೀರೋಹೊಂಡಾ ಫ್ಯಾಷನ್ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2010ನೇ ಇಸವಿ ಫೆಬ್ರವರಿ ತಿಂಗಳ 25ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಖ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

**ಡಾ॥ ವೈ. ಮಂಜುನಾಥ್**
ಡೆಪ್ಯೂಟಿ ಕಮೀಷನರ್ ಎಕ್ಸೈಜ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್.530

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್:408/2007–08, ದಿನಾಂಕ:25ನೇ ಫೆಬ್ರವರಿ, 2010**

**ಉಪಸ್ಥಿತರು: ಡಾ॥ ವೈ. ಮಂಜುನಾಥ್,**
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ/ ಆರೋಪಿ** |
|---|---|---|
| ಅಬಕಾರಿ ನಿರೀಕ್ಷಕರು,<br>ನಂಜನಗೂಡು ವಲಯ, ನಂಜನಗೂಡು. | | ಮರಿನಾಯ್ಕ ಬಿನ್ ಲೇ: ಚನ್ನನಾಯ್ಕ |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:03.05.2008ರಂದು ರಾತ್ರಿ 9:30 ಗಂಟೆ ಸಮಯದಲ್ಲಿ ಅಬಕಾರಿ ನಿರೀಕ್ಷಕರು, ನಂಜನಗೂಡು ವಲಯ ಇವರು ನಂಜನಗೂಡು–ಹುರಾ ಮುಖ್ಯರಸ್ತೆ, ತಗಡೂರು ರಾಮಚಂದ್ರರಾವ್ ನಾಲೆ ಹತ್ತಿರ ಕೆಎ–09/ಇಎಂ–3690 ನೋಂದಣಿ ಸಂಖ್ಯೆಯ ಟಿವಿಎಸ್ ಎಕ್ಸೆಲ್ ಸೂಪರ್ ವಾಹನದಲ್ಲಿ ಅಕ್ರಮವಾಗಿ 4.680 ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತಿದ್ದ ಆರೋಪಕ್ಕಾಗಿ ವಾಹನ ಮತ್ತು ಮದ್ಯವನ್ನು ಜಪ್ತುಗೊಳಿಸಿ, ಪ್ರಥಮ ಮಾಹಿತಿ ವರದಿ ಸಂಖ್ಯೆ:28/2007–08ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11, 13, 14ರ ರೀತ್ಯಾ ಅಪರಾದವಾಗಿದ್ದು, 32, 38(ಎ) ಮತ್ತು 43(ಎ)ರ ರೀತ್ಯಾ ಶಿಕ್ಷಾರ್ಹವಾದ್ದರಿಂದ ಮರಿನಾಯ್ಕ ಬಿನ್ ಲೇ: ಚೆನ್ನನಾಯ್ಕ ಎಂಬ ಆರೋಪಿಯನ್ನು ದಸ್ತಗಿರಿ ಮಾಡಿರುವುದಾಗಿ ಮೊಕದ್ದಮೆ ದಾಖಲಿಸಿ, ಮುಂದಿನ ಕ್ರಮಕ್ಕಾಗಿ ದಾಖಲಾತಿಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ವಾಹನದ ಮಾಲೀಕರಾದ ಬಿ. ರಮೇಶ್ ಬಿನ್ ಮರಿಸ್ವಾಮಿನಾಯ್ಕ್, ಸಂಖ್ಯೆ:86, 2ನೇ ಕ್ರಾಸ್, ಬಿಳಲಿ, ನಂಜನಗೂಡು ತಾಲ್ಲೂಕು ಇವರ ಪರ ವಕೀಲರಾದ ಶ್ರೀ ಪಿ. ಮಹೇಶ್ ಇವರು ದಿನಾಂಕ:05.06.2008ರಂದು ವಕಾಲತ್ತಿನೊಂದಿಗೆ ಅರ್ಜಿ ಸಲ್ಲಿಸಿ ಜಪ್ತುಪಡಿಸಲಾದ ಟಿ.ವಿ.ಎಸ್. ಎಕ್ಸೆಲ್ ವಾಹನವನ್ನು ತಮ್ಮ ಮಧ್ಯಂತರ ಸುಪರ್ದಿಗೆ ಬಿಡುಗಡೆ ಮಾಡಬೇಕೆಂದು ಕೋರಿರುತ್ತಾರೆ.

ಅರ್ಜಿದಾರರು ಸಲ್ಲಿಸಿರುವ ದಾಖಲಾತಿಗಳಂತೆ ವಾಹನ ಮಾಲೀಕರಾದ ಬಿ. ರಮೇಶ್‌ರವರಿಗೆ ಈ ಪ್ರಾಧಿಕಾರದಿಂದ ದಿನಾಂಕ:10.07.2008ರಂದು ವಾಹನ ಮತ್ತು ಮದ್ಯವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ಕಲಂ 43(ಬಿ)ರ ಅಡಿಯಲ್ಲಿ ಕಾರಣ ಕೇಳುವ ನೋಟೀಸನ್ನು ಜಾರಿಗೊಳಿಸಿ ನಂಜನಗೂಡು ವಲಯ ಅಬಕಾರಿ ನಿರೀಕ್ಷಕರು ದಿನಾಂಕ:26.07.2008ರಂದು ಈ ಪ್ರಾಧಿಕಾರಕ್ಕೆ ವರದಿ ಮಾಡಿರುತ್ತಾರೆ.

ಅರ್ಜಿದಾರರು ದಿನಾಂಕ:22.07.2008ರಂದು ಮನವಿಯನ್ನು ಸಲ್ಲಿಸಿ ಆರೋಪವನ್ನು ಅಲ್ಲಗಳೆದು ವಾಹನವು ಅವಶ್ಯಕತೆ ಇರುವುದರಿಂದ ಮಧ್ಯಕಾಲಿಕ ವಶಕ್ಕೆ ನೀಡಬೇಕೆಂದು ಮತ್ತೊಮ್ಮೆ ಕೋರಿರುತ್ತಾರೆ.

ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ದಿನಾಂಕ:03.05.2008ರಂದು ನಂಜನಗೂಡು–ಹುರಾ ಮುಖ್ಯರಸ್ತೆ, ತಗಡೂರು ರಾಮಚಂದ್ರರಾವ್ ನಾಲೆ ಹತ್ತಿರ ಕೆಎ–09/ಇಎಂ–3690 ನೋಂದಣಿ ಸಂಖ್ಯೆಯ ಟಿವಿಎಸ್ ಎಕ್ಸೆಲ್ ಸೂಪರ್ ವಾಹನದಲ್ಲಿ ಅಕ್ರಮವಾಗಿ 4.680 ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಸಂದರ್ಭದಲ್ಲಿ ಆರೋಪಿ ಮರಿನಾಯ್ಕ ಬಿನ್ ಲೇ: ಚನ್ನನಾಯ್ಕ ಇವರನ್ನು ದಸ್ತಗಿರಿಗೊಳಿಸಲಾಗಿರುತ್ತದೆ. ವಾಹನಕ್ಕೆ ಸಂಬಂಧಪಟ್ಟ ಆರೋಪಿಗಳಾಗಲೀ/ ವಾಹನ ಮಾಲೀಕರಾಗಲೀ ತಮ್ಮ ನಿಲುವು ಏನೆಂಬುದನ್ನು ಮತ್ತು ಮಾಲೀಕರ ಮೇಲೆ

ಇರತಕ್ಕಂತಹ ಜವಾಬ್ದಾರಿಯನ್ನು ಪ್ರಾಧಿಕಾರದ ಮುಂದೆ ಹಾಜರಾಗಿ ಇದುವರೆವಿಗೂ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ. ಹಾಗೂ ವಾಹನ ಬಿಡುಗಡೆಗಾಗಿ ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆಸಿರುವುದಿಲ್ಲ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು 20 ತಿಂಗಳಿಗೂ ಹೆಚ್ಚು ಕಾಲ ಕಳೆದಿರುತ್ತದೆ. ವಾಹನ ಮಧ್ಯಂತರ ಬಿಡುಗಡೆಗಾಗಿ ಅರ್ಜಿದಾರರು ಕೋರಿದ್ದು, ಈ ಪ್ರಾಧಿಕಾರದ ನಡವಳಿಗಳಿಗೆ ಸಹಕರಿಸಿರುವುದಿಲ್ಲ ಹಾಗೂ ವಾಹನ ಬಿಡುಗಡೆಗಾಗಿ ಇದೂವರೆವಿಗೂ ಯಾವುದೇ ಪ್ರಯತ್ನ ಪ್ರತಿವಾದಿಗಳ ಕಡೆಯಿಂದ ನಡೆದಿರುವುದಿಲ್ಲ. ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಆಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ/ ಏಜೆಂಟರ್ ಗಮನಕ್ಕೆ ಬಾರದೆ ಮತ್ತು ಅವರುಗಳು ಶಾಮೀಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೆ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/408/2007–08, ದಿನಾಂಕ:25ನೇ ಫೆಬ್ರವರಿ, 2010**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ)ರ ಪ್ರಕಾರ ಅನುಸರಿಸಬೇಕಾದ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43(ಎ) (2) ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬಕಾರಿ ಉಪ ನಿರೀಕ್ಷಕರು, ನಂಜನಗೂಡು ವಲಯ ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:28/2008–09, ದಿನಾಂಕ:03.05.2008 ರಂದು ವಶಪಡಿಸಿಕೊಂಡ ಕೆಎ–09/ಇಎಂ–3690 ನೋಂದಣಿ ಸಂಖ್ಯೆಯ ಟಿವಿಎಸ್ ಎಕ್ಸೆಲ್ ಸೂಪರ್ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2010ನೇ ಇಸವಿ ಫೆಬ್ರವರಿ ತಿಂಗಳ 25ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಖ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

**ಡಾ॥ ವೈ. ಮಂಜುನಾಥ್**
ಡೆಪ್ಯೂಟಿ ಕಮೀಷನರ್ ಎಕ್ಸೈಜ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್.531

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್:617/2008–09, ದಿನಾಂಕ:25ನೇ ಫೆಬ್ರವರಿ, 2010**

**ಉಪಸ್ಥಿತರು: ಡಾ॥ ವೈ. ಮಂಜುನಾಥ್,**
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

| **ಫಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ/ ಆರೋಪಿ** |
|---|---|---|
| ಅಬಕಾರಿ ಉಪ ನಿರೀಕ್ಷಕರು–2, ಟಿ.ನರಸೀಪುರ ವಲಯ, ಟಿ.ನರಸೀಪುರ. | | ಸುಬ್ರಹ್ಮಣ್ಯ ಬಿನ್ ಕೃಷ್ಣಚಾರಿ, ಶ್ರೀನಿವಾಸ ಬಿನ್ ನಾರಾಯಣಸ್ವಾಮಿ, ಕುಮಾರ್ ಮತ್ತು ಇತರರು. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:27.06.2009ರಂದು ಬೆಳಿಗ್ಗೆ 5.00 ಗಂಟೆ ಸಮಯದಲ್ಲಿ ಅಬಕಾರಿ ಉಪ ನಿರೀಕ್ಷಕರು–2, ಟಿ.ನರಸೀಪುರ ವಲಯ ಇವರು ಟಿ.ನರಸೀಪುರ ತಾಲ್ಲೂಕು, ಬನ್ನೂರು ಟೌನ್, ಮೈಸೂರು–ಮಳವಳ್ಳಿ ರಸ್ತೆ, ಸಂತೇಮಾಳ ಸರ್ಕಲ್ ಬಳಿ ಕೆಎ–03/ಬಿ–8857 ನೋಂದಣಿ ಸಂಖ್ಯೆಯ ಟಾಟಾ ಇಂಡಿಕಾ ಕಾರ್ ವಾಹನದಲ್ಲಿ ಅಕ್ರಮವಾಗಿ 43.200 ಲೀ. ನಕಲಿ ಮದ್ಯ ಹಾಗೂ ಕೆಎ–05/ಇಕ್ಯೂ–6012 ನೋಂದಣಿ ಸಂಖ್ಯೆಯ ಹೀರೋ ಹೊಂಡಾ ಸ್ಪ್ಲೆಂಡರ್ ಪ್ಲಸ್ ವಾಹನದಲ್ಲಿ 17.280 ಲೀ. ನಕಲಿ ಮದ್ಯ ಹೊಂದಿ, ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನಗಳು ಮತ್ತು ನಕಲಿ ಮದ್ಯವನ್ನು ಜಪ್ತುಗೊಳಿಸಿ,

ಪ್ರಥಮ ಮಾಹಿತಿ ವರದಿ ಸಂಖ್ಯೆ:25/2008–09ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11, 14ರ ರೀತ್ಯಾ ಅಪರಾಧವಾಗಿದ್ದು, ವಿಧಿ 32, 38(ಎ)ರ ರೀತ್ಯಾ ಶಿಕ್ಷಾರ್ಹವಾದ್ದರಿಂದ ಸುಬ್ರಹ್ಮಣ್ಯ, ಶ್ರೀನಿವಾಸ್, ಕುಮಾರ್ ಮತ್ತು ಚೆಲುವರಾಜು ಇವರನ್ನು ದಸ್ತಗಿರಿ ಮಾಡಿ, ನ್ಯಾಯಾಂಗ ಬಂಧನಕ್ಕೆ ಒಪ್ಪಿಸಿರುವುದಾಗಿ, ಮತ್ತೊಬ್ಬ ಆರೋಪಿಯಾದ ಜಿ.ಕೆ. ಸಂಜು ಎಂಬುವವನು ತಲೆ ಮರೆಸಿಕೊಂಡಿರುವುದಾಗಿ ಮೊಕದ್ದಮೆ ದಾಖಲಿಸಿ, ಮುಂದಿನ ಕ್ರಮಕ್ಕಾಗಿ ದಾಖಲಾತಿಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ವಶಪಡಿಸಿಕೊಂಡ ಕೆಎ–03/ಬಿ–8857 ನೋಂದಣಿ ಸಂಖ್ಯೆಯ ಟಾಟಾ ಇಂಡಿಕಾ ಕಾರ್ ವಾಹನಕ್ಕೆ ಸಂಬಂಧಿಸಿದಂತೆ ಜಿ. ದೀಪಕ್, ಸಂ.501, ಪೇಟೆ ಬೀದಿ, ಮಂಡ್ಯ ಇವರ ಎಸ್.ಪಿ.ಎ. ಹೋಲ್ಡರ್, ಎಂ.ಆರ್.ಬೇಬಿ ಬಿನ್ ರಂಗಯ್ಯ, ಸಂ.376/1, ಶಂಕರನಗರ, ಮಂಡ್ಯ ಇವರ ಪರ ವಕೀಲರು ಈ ಪ್ರಾಧಿಕಾರಕ್ಕೆ ದಿನಾಂಕ:19.08.2009ರಂದು ವಕಾಲತ್ತಿನೊಂದಿಗೆ ಅರ್ಜಿಯನ್ನು ಸಲ್ಲಿಸಿ, ಮಧ್ಯಕಾಲಿನ ವಶಕ್ಕೆ ಬಿಡುಗಡೆ ಮಾಡಿಕೊಡಬೇಕೆಂದು ಕೋರಿರುತ್ತಾರೆ.

ಈ ಪ್ರಕರಣದಲ್ಲಿ ಮಾದರಿ ತೆಗೆಯಲಾದ ಮಾದಕ ದ್ರವ್ಯಗಳನ್ನು ಬೆಂಗಳೂರಿನ ಮುಖ್ಯ ರಾಸಾಯನಿಕ ತಜ್ಞರಿಗೆ ಕಳುಹಿಸಿ, ತಮ್ಮ ವರದಿ ದಿನಾಂಕ:07.07.2009ರಲ್ಲಿ ಈಥೈಲ್ ಆಲ್ಕೋಹಾಲ್ ಪತ್ತೆಯಾಗಿದ್ದು, ಅವುಗಳು ಬ್ಯೂರೋ ಆಫ್ ಇಂಡಿಯನ್ ಸ್ಟ್ಯಾಂಡರ್ಡ್ಸ್ ನಿಗದಿಪಡಿಸಿರುವ ಮಾದರಿ ಗುಣಲಕ್ಷಣಗಳಿಗೆ ಅನುಗುಣವಾಗಿಲ್ಲದಿರುವುದರಿಂದ ಅವು ನಕಲಿ ಮದ್ಯವೆಂದು ರಾಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ.

ಈ ಪ್ರಕರಣದಲ್ಲಿ ಅಬಕಾರಿ ಅಪರಾಧಕ್ಕಾಗಿ 1) ಟಾಟಾ ಇಂಡಿಕಾ ಕಾರ್ ಸಂಖ್ಯೆ: ಕೆಎ–03/ಬಿ–8857 (2) ಹೀರೋ ಹೊಂಡಾ ಸ್ಪ್ಲೆಂಡರ್ ಸಂಖ್ಯೆ:ಕೆಎ–05/ಇಕ್ಯೂ–6012 ಎರಡು ವಾಹನಗಳನ್ನು ಜಪ್ತುಗೊಳಿಸಲಾಗಿದ್ದು, ಈ ಎರಡು ವಾಹನಗಳ ಪೈಕಿ ಟಾಟಾ ಇಂಡಿಕಾ ಕಾರ್ ವಾಹನಕ್ಕೆ ಈಗಾಗಲೇ ಮದ್ಯಂತರ ವಶಕ್ಕೆ ಬಿಡುಗಡೆ ಮಾಡಬೇಕೆಂದು ಕೋರಿ ಅರ್ಜಿ ಸಲ್ಲಿಸಿರುತ್ತಾರೆ. ಉಳಿದ ಮತ್ತೊಂದು ವಾಹನಕ್ಕೆ ಇದುವರೆವಿಗೂ ವಾಹನ ತನ್ನದೆಂದು ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ.

ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ದಿನಾಂಕ:27.06.2009ರಂದು ಟಿ.ನರಸೀಪುರ ತಾಲ್ಲೂಕು, ಬನ್ನೂರು ಟೌನ್, ಮೈಸೂರು–ಮಳವಳ್ಳಿ ರಸ್ತೆ, ಸಂತೇಮಾಳ ಸರ್ಕಲ್ ಬಳಿ ಅಕ್ರಮವಾಗಿ ಕೆಎ–05/ಇಕ್ಯೂ–6012 ನೋಂದಣಿ ಸಂಖ್ಯೆಯ ಹೀರೋ ಹೋಂಡಾ ಸ್ಪ್ಲೆಂಡರ್ ಪ್ಲಸ್ ವಾಹನದಲ್ಲಿ 17.280 ಲೀಟರ್ ನಕಲಿ ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಸಂದರ್ಭದಲ್ಲಿ ಆರೋಪಿ ಸುಬ್ರಹ್ಮಣ್ಯ, ಶ್ರೀನಿವಾಸ್, ಕುಮಾರ್ ಮತ್ತು ಚೆಲುವರಾಜು ಇವರುಗಳನ್ನು ದಸ್ತಗಿರಿ ಮಾಡಲಾಗಿರುತ್ತದೆ. ವಾಹನಕ್ಕೆ ಸಂಬಂಧಪಟ್ಟ ಆರೋಪಿಗಳಾಗಲೀ/ ವಾಹನ ಮಾಲೀಕರಾಗಲೀ ತಮ್ಮ ನಿಲುವು ಏನೆಂಬುದನ್ನು ಮತ್ತು ಮಾಲೀಕರ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಪ್ರಾಧಿಕಾರದ ಮುಂದೆ ಹಾಜರಾಗಿ ಇದುವರೆವಿಗೂ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ. ಹಾಗೂ ವಾಹನ ಬಿಡುಗಡೆಗಾಗಿ ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆಸಿರುವುದಿಲ್ಲ.

ಅಕ್ರಮವಾಗಿ ನಕಲಿ ಮದ್ಯವನ್ನು ತಯಾರಿಸಿ, ಮಾರಾಟ ಮತ್ತು ಸಾಗಾಣಿಕೆಯಂತಹ ವ್ಯವಹಾರದಲ್ಲಿ ತೊಡಗಿ, ಇಂತಹ ಮಾದಕ ದ್ರವ್ಯಗಳನ್ನು ಮುಗ್ದ ಜನರು ಸೇವಿಸಿ, ತಮ್ಮ ಪ್ರಾಣ ಕಳೆದುಕೊಳ್ಳುವುದಲ್ಲದೇ, ಸಮಾಜದ ಮೇಲೆ ದುಷ್ಪರಿಣಾಮ ಉಂಟಾಗುವ ಸಾಧ್ಯತೆಗಳನ್ನು ತಳ್ಳಿಹಾಕುವಂತಿಲ್ಲ. ಇದು ಅಲ್ಲದೇ ಸರ್ಕಾರದ ಬೊಕ್ಕಸಕ್ಕೆ ನಷ್ಟವುಂಟು ಮಾಡುತ್ತಿರುವುದು ಸ್ಪಷ್ಟವಾಗಿ ಕಂಡುಬಂದಿರುತ್ತದೆ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು 7 ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ಕೆಎ–05/ಇಕ್ಯೂ–6012 ನೋಂದಣಿ ಸಂಖ್ಯೆ ಹೀರೋ ಹೋಂಡಾ ಸ್ಪ್ಲೆಂಡರ್ ಪ್ಲಸ್ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಆಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ/ ಏಜೆಂಟರ್ ಗಮನಕ್ಕೆ ಬಾರದೆ ಮತ್ತು ಅವರುಗಳು ಶಾಮೀಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೆ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/617/2008-09, ದಿನಾಂಕ:25ನೇ ಫೆಬ್ರವರಿ, 2010**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) (2) ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬಕಾರಿ ಉಪ ನಿರೀಕ್ಷಕರು-2, ಟಿ.ನರಸೀಪುರ ವಲಯ ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:25/2008-09, ದಿನಾಂಕ:27.06.2009 ರಂದು ವಶಪಡಿಸಿಕೊಂಡ ಕೆಎ-05/ಇಕ್ಯೂ-6012 ನೋಂದಣಿ ಸಂಖ್ಯೆಯ ಹೀರೋ ಹೋಂಡಾ ಸ್ಪ್ಲೆಂಡರ್ ಪ್ಲಸ್ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2010ನೇ ಇಸವಿ ಫೆಬ್ರವರಿ ತಿಂಗಳ 25ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಖ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

**ಡಾ॥ ವೈ. ಮಂಜುನಾಥ್**
ಡೆಪ್ಯೂಟಿ ಕಮೀಷನರ್ ಎಕ್ಸೈಜ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್.532

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್:440/2007-08, ದಿನಾಂಕ:25ನೇ ಫೆಬ್ರವರಿ, 2010**

**ಉಪಸ್ಥಿತರು: ಡಾ॥ ವೈ. ಮಂಜುನಾಥ್,**
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ/ ಆರೋಪಿ** |
|---|---|---|
| ಅಬಕಾರಿ ನಿರೀಕ್ಷಕರು,<br>ನಂಜನಗೂಡು ವಲಯ, ನಂಜನಗೂಡು. | | ಚಂದ್ರ ಬಿನ್ ತಮ್ಮೇಗೌಡ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:20.05.2008ರಂದು ರಾತ್ರಿ 7.00 ಗಂಟೆ ಸಮಯದಲ್ಲಿ ಅಬಕಾರಿ ನಿರೀಕ್ಷಕರು, ನಂಜನಗೂಡು ವಲಯ ಇವರು ನಂಜನಗೂಡು-ಹುಲ್ಲಹಳ್ಳಿ ಹೋಬಳಿ, ಕೊತ್ತನಹಳ್ಳಿ ಗ್ರಾಮದ ಆರೋಪಿಯ ಮನೆಯಲ್ಲಿ ತಲಾ 48 ಸೀಸೆಯ 180 ಮಿಲಿ ಪ್ರಮಾಣದ 17 ರಟ್ಟಿನ ಪೆಟ್ಟಿಗೆಯಲ್ಲಿ ಅಕ್ರಮವಾಗಿ 146.880 ಲೀ. ನಕಲಿಯಂತೆ ಕಾಣುವ ಮದ್ಯವನ್ನು ಹೊಂದಿ ದಾಸ್ತಾನು ಮಾಡಲಾಗಿದ್ದು, ಕೆಎ-18/ಜೆ-4666 ನೋಂದಣಿ ಸಂಖ್ಯೆಯ ಹೀರೋ ಹೋಂಡಾ ವಾಹನವನ್ನು ಸದರಿ ಮಾದಕ ದ್ರವ್ಯಗಳನ್ನು ಸಾಗಾಣಿಕೆಗಾಗಿ ಇಟ್ಟುಕೊಂಡಿದ್ದ ಆರೋಪಕ್ಕಾಗಿ ವಾಹನ ಮತ್ತು ಮಾದಕ ದ್ರವ್ಯಗಳನ್ನು ಜಪ್ತುಪಡಿಸಿ ಪ್ರಥಮ ಮಾಹಿತಿ ವರದಿ ಸಂಖ್ಯೆ: 30/2007-08 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11, 13, 14ರ ರೀತ್ಯಾ ಅಪರಾಧವಾಗಿದ್ದು, 32, 38(ಎ) ಮತ್ತು 43(ಎ)ರ ರೀತ್ಯಾ ಶಿಕ್ಷಾರ್ಹವಾದ್ದರಿಂದ ಚಂದ್ರ ಬಿನ್ ತಮ್ಮೇಗೌಡ ಎಂಬ ಆರೋಪಿಯನ್ನು ದಸ್ತಗಿರಿ ಮಾಡಿರುವುದಾಗಿ ಮೊಕದ್ದಮೆ ದಾಖಲಿಸಿ, ಮುಂದಿನ ಕ್ರಮಕ್ಕಾಗಿ ದಾಖಲಾತಿಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ವಶಪಡಿಸಿಕೊಂಡ ವಾಹನದ ಮಾಲೀಕತ್ವದ ವಿವರವುಳ್ಳ 'ಬಿ' ವಹಿಯನ್ನು ಕೋರಿ, ಚಿಕ್ಕಮಗಳೂರು ಜಿಲ್ಲೆಯ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ದಿನಾಂಕ:14.07.2008ರಂದು ಈ ಪ್ರಾಧಿಕಾರದಿಂದ ಪತ್ರ ಬರೆಯಲಾಗಿರುತ್ತದೆ ಈ ಬಗ್ಗೆ ಯಾವುದೇ ಪ್ರತಿಕ್ರಿಯೆ ಇರುವುದಿಲ್ಲ. ಈ ಪ್ರಕರಣದಲ್ಲಿ ಮಾದರಿ ತೆಗೆಯಲಾದ ಮದ್ಯವನ್ನು ಕೇಂದ್ರ ರಾಸಾಯನಿಕ ಪ್ರಯೋಗಾಲಯಕ್ಕೆ ಒಳಪಡಿಸಿ ವರದಿ ಪಡೆಯಲಾಗಿ ಈಥೇಲ್ ಆಲ್ಕೋಹಾಲ್ ಅಂಶ ಕಂಡುಬಂದಿದ್ದು, ಅವು ಮಾನವ ಸೇವೆಗೆ ಯೋಗ್ಯವಾಗಿರುತ್ತದೆಂದು ರಾಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ. ಮತ್ತೊಮ್ಮೆ 'ಬಿ' ವಹಿಯ ಪ್ರತಿಯನ್ನು ಕೋರಿ ನೆನಪೋಲೆಯನ್ನು ಬರೆಯಲಾಗಿರುತ್ತದೆ.

ನಂಜನಗೂಡು ವಲಯದ ಅಬಕಾರಿ ನಿರೀಕ್ಷಕರು, ಸಂಬಂಧಪಟ್ಟ ಪ್ರಾದೇಶಿಕ ಅಧಿಕಾರಿಗಳಿಂದ ಮೇಲ್ಕಂಡ 'ಬಿ' ವಹಿಯ ಪ್ರತಿಯನ್ನು ಪಡೆದು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಅದನ್ನು ಪರಿಶೀಲಿಸಲಾಗಿ ಬಸಪ್ಪ ಬಿನ್ ವೆಂಕಟಪ್ಪ, ಅಧ್ಯಾಪಕರು, ಎಸ್‌ಜೆಎಂ ಕಾಲೇಜ್, ತರಿಕೆರೆ ಇವರ ಒಡೆತನದಲ್ಲಿರುವುದು ಕಂಡು ಬಂದಿರುತ್ತದೆ. ಕರ್ನಾಟಕ ಅಬಕಾರಿ

ಕಾಯಿದೆ 1965ರ ಕಲಂ 43(ಬಿ) ರ ಅಡಿಯಲ್ಲಿ ಕಾರಣ ಕೇಳುವ ನೋಟೀಸ್‌ನ್ನು ನೋಂದಣಿ ಅಂಚೆ ಮೂಲಕ ಕಳುಹಿಸಲಾಗಿದ್ದು, ಸದರಿ ನೋಟೀಸ್ ದಿನಾಂಕ:07.01.2009 ರಂದು ಸಂಬಂಧಪಟ್ಟವರಿಗೆ ಜಾರಿಯಾಗಿ ಸ್ವೀಕೃತಿಯು ಈ ಪ್ರಾಧಿಕಾರಕ್ಕೆ ಸ್ವೀಕೃತವಾಗಿರುತ್ತದೆ. ಅರ್ಜಿದಾರರ ಪರ ವಕೀಲರು ಕಾರಣ ಕೇಳುವ ನೋಟಿಸ್‌ಗೆ ಪ್ರತಿಕ್ರಿಯಿಸಿ ತನ್ನ ಕಕ್ಷಿದಾರನು ಕನ್ನಡ ಅಧ್ಯಾಪಕನಾಗಿದ್ದು, ಇವರು ಸದರಿ ವಾಹನವನ್ನು ಕೆನರಾ ಬ್ಯಾಂಕ್ ಲೋನ್ ಮುಖಾಂತರ ಖರೀದಿಸಲಾಗಿರುತ್ತದೆ. ತರಿಕೆರೆಯಿಂದ ಧಾರವಾಡಕ್ಕೆ 2007ನೇ ವರ್ಷದಲ್ಲಿ ವರ್ಗಾವಣೆಯಾಗಿದ್ದು, ಆ ಸಂದರ್ಭದಲ್ಲಿ ತರಿಕೆರೆಯಿಂದ ಧಾರವಾಡಕ್ಕೆ ದೂರದ ಅಂತರ ಹೆಚ್ಚಾಗಿರುವುದರಿಂದ ವಾಹನವನ್ನು ತೆಗೆದುಕೊಂಡು ಹೋಗಿರುವುದಿಲ್ಲ. ತನ್ನ ಕಕ್ಷಿದಾರರ ಅಳಿಯನಾದ ನಾಗಪ್ಪ ಬಸಪ್ಪ ಕಟ್ಟಿಮನಿ ಇವರು ಮೈಸೂರಿನಲ್ಲಿ ಖಾಸಗಿ ಕಾರ್ಖಾನೆಯಲ್ಲಿ ಕೆಲಸ ಮಾಡುತ್ತಿದ್ದು ಆತನಿಗೆ ವಾಹನವನ್ನು ನೀಡಲಾಗಿತ್ತು. ಈ ಸಂದರ್ಭದಲ್ಲಿ ಅಬಕಾರಿ ಅಪರಾಧಕ್ಕಾಗಿ ಮೊಕದ್ದಮೆ ದಾಖಲಾಗಿರುತ್ತದೆ. ವಾಹನದ ಮಾಲೀಕನ ತಿಳುವಳಿಕೆಯಲ್ಲಿ ನಡೆದಿರುವುದಿಲ್ಲವೆಂದು ಆರೋಪವನ್ನು ಅಲ್ಲಗಳೆದಿರುತ್ತಾರೆ.

ಜಪ್ತುಗೊಳಿಸಲಾದ ವಾಹನವನ್ನು ತನ್ನ ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಿಕೊಡಬೇಕೆಂದು ದಿನಾಂಕ:12.02.2009ರಂದು ಅರ್ಜಿದಾರರಾದ ಬಸಪ್ಪ ಬಿನ್ ವೆಂಕಟಪ್ಪ ಇವರ ಪರ ವಕೀಲರು ವಕಾಲತ್ತಿನೊಂದಿಗೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ದಿನಾಂಕ:20.05.2008ರಂದು ನಂಜನಗೂಡು–ಹುಲ್ಲಹಳ್ಳಿ ಹೋಬಳಿ, ಕೊತ್ತನಹಳ್ಳಿ ಗ್ರಾಮದ ಆರೋಪಿಯ ಮನೆಯಲ್ಲಿ ತಲಾ 48 ಸೀಸೆಯ 180 ಮಿಲಿ ಪ್ರಮಾಣದ 17 ರಟ್ಟಿನ ಪೆಟ್ಟಿಗೆಯಲ್ಲಿ ಅಕ್ರಮವಾಗಿ 146.880 ಲೀ. ನಕಲಿಯಂತೆ ಕಾಣುವ ಮದ್ಯವನ್ನು ಹೊಂದಿ ದಾಸ್ತಾನು ಮಾಡಲಾಗಿದ್ದು, ಕೆಎ–18/ಜೆ–4666 ನೋಂದಣಿ ಸಂಖ್ಯೆಯ ಹೀರೋ ಹೋಂಡಾ ವಾಹನವನ್ನು ಸದರಿ ಮಾದಕ ದ್ರವ್ಯಗಳನ್ನು ಸಾಗಾಣಿಕೆಗಾಗಿ ಇಟ್ಟುಕೊಂಡಿದ್ದ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಸಂದರ್ಭದಲ್ಲಿ ಆರೋಪಿ ಚಂದ್ರ ಬಿನ್ ತಮ್ಮೇಗೌಡ ಇವರನ್ನು ದಸ್ತಗಿರಿಗೊಳಿಸಲಾಗಿರುತ್ತದೆ. ಮಾಲೀಕರ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಪ್ರಾಧಿಕಾರದ ಮುಂದೆ ಹಾಜರಾಗಿ ಇದುವರೆವಿಗೂ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ. ವಾಹನವನ್ನು ಅಳಿಯನಿಗೆ ಇಂತಹ ಕೃತ್ಯಕ್ಕೆ ಬಳಸಬಾರದು ಎಂಬುದರ ಬಗ್ಗೆ ಮುನ್ನೆಚ್ಚರಿಕೆ ಕ್ರಮಗಳನ್ನು ತಿಳಿಸಿರುವ ಬಗ್ಗೆ ಯಾವುದೇ ಸಾಕ್ಷ್ಯಾಧಾರಗಳನ್ನು ಹಾಜರುಪಡಿಸಿರುವುದಿಲ್ಲ. ಹಾಗೂ ಇಂತಹ ನಕಲಿ ಮದ್ಯ ದಂಧೆಯಲ್ಲಿ ತೊಡಗಿಕೊಂಡು ಅಮಾಯಕ ಜನರ ಸಾವು–ನೋವುಗಳಿಗೆ ಕಾರಣವಾಗುವ ಸಾಧ್ಯತೆಗಳನ್ನು ತಳ್ಳಿಹಾಕುವಂತಿಲ್ಲ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು 20 ತಿಂಗಳಿಗೂ ಹೆಚ್ಚು ಕಾಲ ಕಳೆದಿರುತ್ತದೆ. ವಾಹನ ಮಧ್ಯಂತರ ಬಿಡುಗಡೆಗಾಗಿ ಅರ್ಜಿದಾರರು ಕೋರಿದ್ದು, ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಆಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ/ ಏಜೆಂಟರ್ ಗಮನಕ್ಕೆ ಬಾರದೆ ಮತ್ತು ಅವರುಗಳು ಶಾಮೀಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೆ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/440/2007–08, ದಿನಾಂಕ:25ನೇ ಫೆಬ್ರವರಿ, 2010**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ)ರ ಪ್ರಕಾರ ಅನುಸರಿಸಬೇಕಾದ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43(ಎ) (2) ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬಕಾರಿ ಉಪ ನಿರೀಕ್ಷಕರು, ನಂಜನಗೂಡು ವಲಯ ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:30/2007–08, ದಿನಾಂಕ:20.05.2008 ರಂದು ವಶಪಡಿಸಿಕೊಂಡ ಕೆಎ–18/ಜೆ–4666 ನೋಂದಣಿ ಸಂಖ್ಯೆಯ ಹೀರೋ ಹೋಂಡಾ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2010ನೇ ಇಸವಿ ಫೆಬ್ರವರಿ ತಿಂಗಳ 25ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಖ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

**ಡಾ॥ ವೈ. ಮಂಜುನಾಥ್**
ಡೆಪ್ಯೂಟಿ ಕಮೀಷನರ್ ಎಕ್ಸೈಜ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್.533

**ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ಅರಸೀಕೆರೆ, ತಾಲ್ಲೂಕು, ಹಾಸನ ಜಿಲ್ಲೆ**

**ವಿಷಯ:** ಶ್ರೀಮತಿ ಸೈಯದ್ ಅಶ್ರಫ್ ಉನ್ನೀಸ, ಸಶಿ ಸರ್ಕಾರಿ ಉರ್ದು ಕಿ.ಪ್ರಾ.ಶಾಲೆ ಹಾರನಹಳ್ಳಿ, ಅರಸೀಕೆರೆ ತಾಲ್ಲೂಕು ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಅಪೀಲು) ನಿಯಮಾವಳಿಗಳ ರೀತ್ಯಾ ಕೆಲಸದಿಂದ ವಜಾ ಮಾಡುವ ಬಗ್ಗೆ.

**ಉಲ್ಲೇಖ:** 1) ಘನ ಸಿವಿಲ್ ನ್ಯಾಯಾಲಯ ಜೆ.ಎಂ.ಎಫ್.ಸಿ. ಅರಸೀಕೆರೆ ತೀರ್ಪು ದಿನಾಂಕ:06.08.2008.

2) ಠಾಣಾಧಿಕಾರಿಗಳು, ನಗರ ಪೋಲೀಸ್ ಠಾಣೆ ಅರಸೀಕೆರೆ ಇವರ ಪತ್ರ ದಿನಾಂಕ:08.01.2010ರ ರೀತ್ಯಾ.

3) ಉಪನಿರ್ದೇಶಕರು, ಸಾಶಿಇ ಹಾಸನ ಇವರ ಪತ್ರ ಸಂಖ್ಯೆ: ಆಡಳಿತ 4 ಪ್ರಾಶಿ. ದೂರು 18/09–10, ದಿನಾಂಕ:06.01.2010.

**ಪ್ರಸ್ತಾವನೆ:**

ಮೇಲಿನ ವಿಷಯಕ್ಕೆ ಸಂಬಂಧಪಟ್ಟಂತೆ ಶ್ರೀಮತಿ ಸೈಯದ್ ಅಶ್ರಫ್ ಉನ್ನೀಸ, ಸಹ ಶಿಕ್ಷಕಿ ಸರ್ಕಾರಿ ಉರ್ದು ಕಿರಿಯ ಪ್ರಾಥಮಿಕ ಶಾಲೆ ಹಾರನಹಳ್ಳಿ ಅರಸೀಕೆರೆ ತಾಲ್ಲೂಕು ಇವರು ಶ್ರೀಮತಿ ಆರ್. ಅಂಬಿಕಾ ತಂದೆ ರಂಗಸ್ವಾಮಿ, ಅರಸೀಕೆರೆ ಇವರಿಂದ 3 ಲಕ್ಷ ರೂ.ಗಳನ್ನು ಸಾಲ ಪಡೆದು ವಂಚಿಸಿರುವ ಕ್ರಿಮಿನಲ್ ಪ್ರಕರಣದಲ್ಲಿ ಸದರಿ ಶಿಕ್ಷಕಿಗೆ ಅರಸೀಕೆರೆ ಘನ ನ್ಯಾಯಾಲಯವು ಸಿಸಿ. ಸಂಖ್ಯೆ:1106/07 ದಿನಾಂಕ:06.08.2008 ರೀತ್ಯ ಜೈಲು ಶಿಕ್ಷೆ ವಿಧಿಸಿದ್ದು, ಈಗ ಶಿಕ್ಷೆ ಜಾರಿಯಾಗಿ ಇವರನ್ನು ಜೈಲಿನಲ್ಲಿಡಲಾಗಿದೆ. ಈ ಬಗ್ಗೆ ಠಾಣಾಧಿಕಾರಿಗಳು, ನಗರ ಪೋಲೀಸ್ ಠಾಣೆ, ಅರಸೀಕೆರೆ ಇವರು ಉಲ್ಲೇಖ 2ರ ಪತ್ರದ ರೀತ್ಯಾ ಸದರಿ ಶಿಕ್ಷಕಿಗೆ ದಸ್ತಗಿರಿ ವಾರೆಂಟ್ ಹೊರಡಿಸಿದ್ದು ದಿನಾಂಕ:02.11.2009ರಂದು ದಸ್ತಗಿರಿ ಮಾಡಿ ಮಾನ್ಯ ನ್ಯಾಯಾಲಯಕ್ಕೆ ಹಾಜರುಪಡಿಸಿದ್ದು, ಮಾನ್ಯ ನ್ಯಾಯಾಲಯವು ಸದರಿ ಆರೋಪಿಗೆ ನ್ಯಾಯಾಂಗ ಬಂಧನದಲ್ಲಿಡಲು ಆದೇಶಿಸಿದ್ದು, ಆ ಪ್ರಕಾರ ಆರೋಪಿಯನ್ನು ಹಾಸನ ಜಿಲ್ಲಾ ಬಂಧೀಖಾನೆಗೆ ಬಿಟ್ಟು ಬಂದಿರುವುದಾಗಿ ವರದಿ ಮಾಡಿರುತ್ತಾರೆ. ಉಲ್ಲೇಖ 3 ರೀತ್ಯಾ ಮಾನ್ಯ ಉಪನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇಲಾಖೆ ಹಾಸನ ಇವರು ಸದರಿ ಶಿಕ್ಷಕಿಯ ಮೇಲೆ ಸಿ.ಸಿ.ಎ. ನಿಯಮದಂತೆ ಶಿಸ್ತು ಕ್ರಮ ಜರುಗಿಸಿ ವರದಿ ಮಾಡಲು ತಿಳಿಸಿರುತ್ತಾರೆ. ಸದರಿಯವರು ಜೈಲು ಶಿಕ್ಷೆ ಅನುಭವಿಸುತ್ತಿದ್ದರೂ ಅನಾರೋಗ್ಯ ನಿಮಿತ್ತ ವೇತನ ರಹಿತ ರಜೆಯನ್ನು ಹಾಕಿರುವುದಾಗಿ ಮನವಿ ಸಲ್ಲಿಸುತ್ತಿದ್ದು ಈ ಮೂಲಕ ಇಲಾಖೆಗೆ ಸುಳ್ಳು ಮಾಹಿತಿಯನ್ನು ನೀಡುತ್ತಿರುವುದು ಸ್ಪಷ್ಟವಾಗಿ ಕಂಡುಬಂದಿರುತ್ತದೆ.

**ಆದೇಶ**

**ಸಂಖ್ಯೆ: ಪ.ವ್ಯ.ಅ:14/09–10, ದಿನಾಂಕ:15ನೇ ಜನವರಿ, 2010**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನಲೆಯಲ್ಲಿ ಶ್ರೀ ಎನ್.ಜಿ. ಬಸವರಾಜು ನೇಮಕಾತಿ ಪ್ರಾಧಿಕಾರಿ ಹಾಗೂ ಶಿಸ್ತು ಪ್ರಾಧಿಕಾರಿ ಮತ್ತು ಕ್ಷೇತ್ರ ಶಿಕ್ಷಣಾಧಿಕಾರಿಗಳು, ಸಾರ್ವಜನಿಕ ಶಿಕ್ಷಣ ಇಲಾಖೆ, ಅರಸೀಕೆರೆ ಹಾಸನ ಜಿಲ್ಲೆ ಆದ ನಾನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಹಾಗೂ ಮೇಲ್ಮನವಿ) ನಿಯಮಗಳು 1957ರ ನಿಯಮ 8 (VIII) ರಲ್ಲಿನ ಅವಕಾಶದಂತೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀಮತಿ ಸೈಯದ್ ಆಶ್ರಫ್ ಉನ್ನೀಸ, ಸಹ ಶಿಕ್ಷಕಿ ಸರ್ಕಾರಿ ಉರ್ದು ಕಿರಿಯ ಪ್ರಾಥಮಿಕ ಶಾಲೆ ಹಾರನಹಳ್ಳಿ ಅರಸೀಕೆರೆ ತಾಲ್ಲೂಕು ಇವರನ್ನು ಈ ತಕ್ಷಣದಿಂದಲೇ ಜಾರಿಗೆ ಬರುವಂತೆ ಸೇವೆಯಿಂದ ವಜಾ ಮಾಡಿ ಆದೇಶಿಸಿರುತ್ತೇನೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಜಿ. ಬಸವರಾಜು**

ಶಿಸ್ತು ಪ್ರಾಧಿಕಾರಿ ಹಾಗೂ ಕ್ಷೇತ್ರ ಶಿಕ್ಷಣಾಧಿಕಾರಿಗಳು
ಸಾರ್ವಜನಿಕ ಶಿಕ್ಷಣ ಇಲಾಖೆ
ಅರಸೀಕೆರೆ, ಹಾಸನ ಜಿಲ್ಲೆ.

ಪಿ.ಆರ್.188

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ, ಶಿವಮೊಗ್ಗಜಿಲ್ಲೆ, ಶಿವಮೊಗ್ಗ**

**ನಂ.ಕ್ರಮಾಂಕ:ಡಿಆರ್‌ಎಸ್/ಸಮಾಪನೆ/ಡಿಎಲ್‌ಎಸ್/24/2005–06/1519, ದಿನಾಂಕ:23ನೇ ಜನವರಿ, 2010**

**ವಿಷಯ:** ಗ್ರಾಮಾಂತರ ಮಹಿಳಾ ವಿವಿಧೋದ್ದೇಶ ಸಹಕಾರ ಸಂಘ ನಿ., ಹೊಸಮನೆ, ಶಿವಮೊಗ್ಗ, ಇದರ ಸಮಾಪನಾಧಿಕಾರಿಗಳ ಮರು ನೇಮಕ ಮಾಡುವ ಬಗ್ಗೆ.

**ಉಲ್ಲೇಖ:** 1) ಸ.ಸಂ. ಸಹಾಯಕ ನಿಬಂಧಕರು, ಶಿವಮೊಗ್ಗ ಇವರ ಪತ್ರ ಸಂಖ್ಯೆ:ಎಆರ್–24/ಸಮಾಪನೆ ಸಿಆರ್–6/2005–06/ ದಿನಾಂಕ:24.04.2006.

2) ಈ ಕಛೇರಿಯ ಆದೇಶ ಕ್ರಮಾಂಕ: ಡಿಆರ್ಎಸ್/ ಸಮಾಪನೆ/ ಡಿಎಲ್ಎಸ್/24/ 2005–06/412, ದಿನಾಂಕ:18.05.2006.

3) ಮಾರಾಟಾಧಿಕಾರಿಗಳು–2, ಸ.ಸಂ. ಸಹಾಯಕ ನಿಬಂಧಕರ ಕಛೇರಿ, ಶಿವಮೊಗ್ಗ ಇವರು ಪ್ರಭಾರ ವಹಿಸಿಕೊಂಡ ದಿನಾಂಕ:09.06.2006.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗರವರ ಉಲ್ಲೇಖ (1)ರ ಶಿಫಾರಸ್ಸಿನ ಮೇರೆಗೆ ಗ್ರಾಮಾಂತರ ಮಹಿಳಾ ವಿವಿಧೋದ್ದೇಶ ಸಹಕಾರ ಸಂಘ ನಿ. ಹೊಸಮನೆ, ಶಿವಮೊಗ್ಗ, ಈ ಸಹಕಾರ ಸಂಘವನ್ನು ಸಮಾಪನೆಗೊಳಿಸಿ ಮಾರಾಟಾಧಿಕಾರಿ–2, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಶಿವಮೊಗ್ಗ ಇವರನ್ನು ಸಮಾಪನಾಧಿಕಾರಿಗಳಾಗಿ ನೇಮಿಸಿ ಉಲ್ಲೇಖ (2)ರಲ್ಲಿ ಆದೇಶ ಹೊರಡಿಸಲಾಗಿತ್ತು. ಸಮಾಪನಾಧಿಕಾರಿಗಳು ದಿನಾಂಕ:09.06.2006ರಂದು ಪ್ರಭಾರ ವಹಿಸಿಕೊಂಡು ಸಮಾಪನಾ ಕಾರ್ಯ ಕೈಗೊಂಡಿರುತ್ತಾರೆ. ಸದರಿಯವರು ಪದೋನ್ನತಿ ಹೊಂದಿ ವರ್ಗಾವಣೆಯಾದ ಪ್ರಯುಕ್ತ ಶಿವಮೊಗ್ಗ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿಯಲ್ಲಿನ ನಿರೀಕ್ಷಕರು ಪ್ರಭಾರದಲ್ಲಿದ್ದರು. ನಿರೀಕ್ಷಕರ ಮತ್ತು ಹಿರಿಯ ನಿರೀಕ್ಷಕರುಗಳ ಪದೋನ್ನತಿಯಾದ ನಂತರ ಸಿಬ್ಬಂದಿಗಳು ಆಯಾ ಹುದ್ದೆಗಳಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ. ಆದ್ದರಿಂದ ಸಮಾಪನಾಧಿಕಾರಿಗಳ ಮರುನೇಮಕ ಮಾಡುವುದು ಅಗತ್ಯವಾಗಿರುತ್ತದೆ. ಪ್ರಯುಕ್ತ ಈ ಸಹಕಾರ ಸಂಘದ ಸಮಾಪನಾಧಿಕಾರಿಯಾಗಿ ನಿರೀಕ್ಷಕರು, ಶಿವಮೊಗ್ಗ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಶಿವಮೊಗ್ಗ ಇವರನ್ನು ನೇಮಿಸಿ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 73ರನ್ವಯ ಮತ್ತು ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/69/ಸಿಎಲ್ಎಂ/ದಿನಾಂಕ:21.11.2001ರಲ್ಲಿ ದತ್ತವಾದ ಅಧಿಕಾರದನ್ವಯ, ಸಿ.ಎನ್. ದೇವರಾಜ್, ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಗ್ರಾಮಾಂತರ ಮಹಿಳಾ ವಿವಿಧೋದ್ದೇಶ ಸಹಕಾರ ಸಂಘ ನಿ. ಹೊಸಮನೆ, ಶಿವಮೊಗ್ಗ ಈ ಸಂಘದ ಸಮಾಪನಾಧಿಕಾರಿಯಾಗಿ ನಿರೀಕ್ಷಕರು, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಶಿವಮೊಗ್ಗ ಇವರನ್ನು ನೇಮಕ ಮಾಡಿರುತ್ತೇನೆ. ಸಮಾಪನಾಧಿಕಾರಿಯವರು ಕೂಡಲೇ ಸಂಘದ ಪ್ರಭಾರವನ್ನು ಪಡೆದು ನಡವಳಿಕೆ ನಡೆಸತಕ್ಕದ್ದು; ಮತ್ತು ಬಾಕಿ ಇರುವ ಸಮಾಪನಾ ಕಾರ್ಯವನ್ನು ಪೂರ್ಣಗೊಳಿಸಿ ಸಂಘದ ನೊಂದಣಿ ರದ್ಧತಿಗೆ ಪ್ರಸ್ತಾವನೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಈ ದಿನ ದಿನಾಂಕ: ಇಪ್ಪತ್ತಮೂರನೇ ಜನವರಿ 2010 ರಂದು ಸ್ವಸಹಿ ಮತ್ತು ಕಛೇರಿ ಮೊಹರಿನೊಂದಿಗೆ ಹೊರಡಿಸಲಾಗಿದೆ.

**ಸಿ.ಎನ್. ದೇವರಾಜ್**
ಸಹಕಾರ ಸಂಘಗಳ ಉಪನಿಬಂಧಕರು,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

ಪಿ.ಆರ್.189

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ, ಶಿವಮೊಗ್ಗಜಿಲ್ಲೆ, ಶಿವಮೊಗ್ಗ**

**ನಂ.ಕ್ರಮಾಂಕ:ಡಿಆರ್ಎಸ್/ಸಮಾಪನೆ/ಡಿಎಲ್ಎಸ್/23/2005–06/1523, ದಿನಾಂಕ:23ನೇ ಜನವರಿ, 2010**

**ವಿಷಯ:** ಮಹಿಳಾ ಕೈಗಾರಿಕಾ ಸಹಕಾರ ಸಂಘ ನಿ., ಹೊಸಮನೆ, ಶಿವಮೊಗ್ಗ, ಇದರ ಸಮಾಪನಾಧಿಕಾರಿಗಳ ಮರು ನೇಮಕ ಮಾಡುವ ಬಗ್ಗೆ.

**ಉಲ್ಲೇಖ:** 1) ಸ.ಸಂ. ಸಹಾಯಕ ನಿಬಂಧಕರು, ಶಿವಮೊಗ್ಗ ಇವರ ಪತ್ರ ಸಂಖ್ಯೆ:ಎಆರ್–24/ಸಮಾಪನೆ ಸಿಆರ್–4/2005–06/ ದಿನಾಂಕ:24.04.2006.

2) ಈ ಕಛೇರಿಯ ಆದೇಶ ಕ್ರಮಾಂಕ: ಡಿಆರ್ಎಸ್/ ಸಮಾಪನೆ/ ಡಿಎಲ್ಎಸ್/23/ 2005–06/411, ದಿನಾಂಕ:18.05.2006.

3) ಮಾರಾಟಾಧಿಕಾರಿಗಳು-2, ಸ.ಸಂ. ಸಹಾಯಕ ನಿಬಂಧಕರ ಕಛೇರಿ, ಶಿವಮೊಗ್ಗ ಇವರು ಪ್ರಭಾರ ವಹಿಸಿಕೊಂಡ ದಿನಾಂಕ:09.06.2006.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗರವರ ಉಲ್ಲೇಖ (1)ರ ಶಿಫಾರಸ್ಸಿನ ಮೇರೆಗೆ ಮಹಿಳಾ ಕೈಗಾರಿಕಾ ಸಹಕಾರ ಸಂಘ ನಿ. ಹೊಸಮನೆ, ಶಿವಮೊಗ್ಗ, ಈ ಸಹಕಾರ ಸಂಘವನ್ನು ಸಮಾಪನೆಗೊಳಿಸಿ ಮಾರಾಟಾಧಿಕಾರಿ-2, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಶಿವಮೊಗ್ಗ ಇವರನ್ನು ಸಮಾಪನಾಧಿಕಾರಿಗಳಾಗಿ ನೇಮಿಸಿ ಉಲ್ಲೇಖ (2)ರಲ್ಲಿ ಆದೇಶ ಹೊರಡಿಸಲಾಗಿತ್ತು. ಸಮಾಪನಾಧಿಕಾರಿಗಳು ದಿನಾಂಕ:09.06.2006ರಂದು ಪ್ರಭಾರ ವಹಿಸಿಕೊಂಡು ಸಮಾಪನಾ ಕಾರ್ಯ ಕೈಗೊಂಡಿರುತ್ತಾರೆ. ಸದರಿಯವರು ಪದೋನ್ನತಿ ಹೊಂದಿ ವರ್ಗಾವಣೆಯಾದ ಪ್ರಯುಕ್ತ ಶಿವಮೊಗ್ಗ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿಯಲ್ಲಿನ ನಿರೀಕ್ಷಕರು ಪ್ರಭಾರದಲ್ಲಿದ್ದರು. ನಿರೀಕ್ಷಕರ ಮತ್ತು ಹಿರಿಯ ನಿರೀಕ್ಷಕರುಗಳ ಪದೋನ್ನತಿಯಾದ ನಂತರ ಸಿಬ್ಬಂದಿಗಳು ಆಯಾ ಹುದ್ದೆಗಳಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ. ಆದ್ದರಿಂದ ಸಮಾಪನಾಧಿಕಾರಿಗಳ ಮರುನೇಮಕ ಮಾಡುವುದು ಅಗತ್ಯವಾಗಿರುತ್ತದೆ. ಪ್ರಯುಕ್ತ ಈ ಸಹಕಾರ ಸಂಘದ ಸಮಾಪನಾಧಿಕಾರಿಯಾಗಿ ಶ್ರೀ ಮಹೇಶ್‌ಬಾಬು ನಿರೀಕ್ಷಕರು, ಶಿವಮೊಗ್ಗ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಶಿವಮೊಗ್ಗ ಇವರನ್ನು ನೇಮಿಸಿ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 73ರನ್ವಯ ಮತ್ತು ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/69/ಸಿಎಲ್ಎಂ/ದಿನಾಂಕ:21.11.2001ರಲ್ಲಿ ದತ್ತವಾದ ಅಧಿಕಾರದನ್ವಯ, ಸಿ.ಎನ್. ದೇವರಾಜ್, ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಮಹಿಳಾ ಕೈಗಾರಿಕಾ ಸಹಕಾರ ಸಂಘ ನಿ. ಹೊಸಮನೆ, ಶಿವಮೊಗ್ಗ ಈ ಸಂಘದ ಸಮಾಪನಾಧಿಕಾರಿಯಾಗಿ ಮಹೇಶ್‌ಬಾಬು, ನಿರೀಕ್ಷಕರು, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಶಿವಮೊಗ್ಗ ಇವರನ್ನು ನೇಮಕ ಮಾಡಿರುತ್ತೇನೆ. ಸಮಾಪನಾಧಿಕಾರಿಯವರು ಕೂಡಲೇ ಸಂಘದ ಪ್ರಭಾರವನ್ನು ಪಡೆದು ನಡವಳಿಕೆ ನಡೆಸತಕ್ಕದ್ದು. ಮತ್ತು ಬಾಕಿ ಇರುವ ಸಮಾಪನಾ ಕಾರ್ಯವನ್ನು ಪೂರ್ಣಗೊಳಿಸಿ ಸಂಘದ ನೊಂದಣಿ ರದ್ಧತಿಗೆ ಪ್ರಸ್ತಾವನೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಈ ದಿನ ದಿನಾಂಕ: ಇಪ್ಪತ್ತಮೂರನೇ ಜನವರಿ 2010 ರಂದು ಸ್ವಸಹಿ ಮತ್ತು ಕಛೇರಿ ಮೊಹರಿನೊಂದಿಗೆ ಹೊರಡಿಸಲಾಗಿದೆ.

**ಸಿ.ಎನ್. ದೇವರಾಜ್**
ಸಹಕಾರ ಸಂಘಗಳ ಉಪನಿಬಂಧಕರು,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

ಪಿ.ಆರ್.190

## ಆಯುಕ್ತರು ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ ಬೆಂಗಳೂರು, ಇವರ ನಡವಳಿ

### ಸಂಖ್ಯೆ: ಸಿಬ್ಬಂದಿ.ಶಿಸ್ತು.ಅಗೈಹಾ.29/05-06, ದಿನಾಂಕ:27ನೇ ಜನವರಿ, 2010

**ವಿಷಯ:** ಶ್ರೀ ಕೆ.ಎಲ್. ಸುಭಾಶ್‌ಚಂದ್ರಬೋಸ್, ದ್ವಿತೀಯ ದರ್ಜೆ ಭೂಮಾಪಕರು ತಹಸೀಲ್ದಾರ್ ಕಛೇರಿ, ಅರಸೀಕೆರೆ ಇವರ ಅನಧಿಕೃತ ಗೈರುಹಾಜರಿ ಬಗ್ಗೆ ಶಿಸ್ತು ಕ್ರಮ-ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯ ಸಮಸಂಖ್ಯೆಯ ಕಾರಣ ಕೇಳಿ ನೋಟೀಸು (ಆರೋಪ ಪಟ್ಟಿಯೊಂದಿಗೆ) ದಿನಾಂಕ:15.05.2006.

2) ವಿಚಾರಣಾಧಿಕಾರಿಗಳನ್ನು ನೇಮಕ ಮಾಡಿದ ಈ ಕಛೇರಿಯ ಸಮಸಂಖ್ಯೆ ನಡವಳಿ ದಿನಾಂಕ:09.03.2007.

3) ವಿಚಾರಣಾಧಿಕಾರಿಗಳ ವರದಿ ಸಂಖ್ಯೆ:ಸಂ.ಭೂ.ಉ.ನಿ. ಸಿಬ್ಬಂದಿ.18/07-08, ದಿನಾಂಕ:15.01.2009.

4) ಈ ಕಛೇರಿಯ 2ನೇ ಕಾರಣ ಕೇಳಿ ನೋಟೀಸು ಸಮಸಂಖ್ಯೆ ದಿನಾಂಕ:17.05.2009.

**ಪ್ರಸ್ತಾವನೆ:**

ಶ್ರೀ ಕೆ.ಎಲ್. ಸುಭಾಶ್‌ಚಂದ್ರಬೋಸ್, ದ್ವಿತೀಯ ದರ್ಜೆ ಭೂಮಾಪಕರು, ತಹಸೀಲ್ದಾರ್ ಕಛೇರಿ, ಅರಸೀಕೆರೆ ಆದ ಇವರು ಹಿಂದೆ ಭೂದಾಖಲೆಗಳ ಸಹಾಯಕ ನಿರ್ದೇಶಕರು, ಮಂಡ್ಯ ಕಛೇರಿ ವ್ಯಾಪ್ತಿಯ ಮದ್ದೂರು ತಾಲ್ಲೂಕು ಭೂಮಾಪನ

ವಿಲೇವಾರಿಗೊಳಿಸಲು ಕ್ರಮವಿಟ್ಟು ನೊಂದಣಿ ರದ್ಧತಿಗಾಗಿ ಈ ಆದೇಶ ಹೊರಡಿಸಿದ 30 ದಿವಸಗಳೊಳಗಾಗಿ ಪ್ರಸ್ತಾವ ಸಲ್ಲಿಸಲು ಸೂಚಿಸಿದೆ.

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿ ಮುದ್ರೆಯೊಂದಿಗೆ ಇಂದು 31ನೇ ಡಿಸೆಂಬರ್ 2009ರಂದು ಹೊರಡಿಸಲಾಗಿದೆ.

ಸಹಕಾರ ಸಂಘಗಳ ಉಪನಿಬಂಧಕರು,

ಪಿ.ಆರ್.259 ಬೀದರ ಜಿಲ್ಲೆ, ಬೀದರ.

**ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿ**

**ವಿಷಯ:** ಹಾಸನ ಜಿಲ್ಲೆ, ಆಲೂರು ತಾಲ್ಲೂಕು, ಮಾದಿಹಳ್ಳಿ ಗ್ರಾಮದಲ್ಲಿ ಕಪ್ಪು ಶಿಲೆ ಗ್ರಾನೈಟ್‌ಗಾಗಿ ಮೆ:ಜೂಂ ಮಿನರಲ್, ಡೆವಲಪ್‌ಮೆಂಟ್ (ಪ್ರೈ) ಲಿಮಿಟೆಡ್ ರವರಿಗೆ ಮಂಜೂರಾಗಿದ್ದ ಕಲ್ಲುಗಣಿ ಗುತ್ತಿಗೆ ಸಂಖ್ಯೆ:782ರ ಗುತ್ತಿಗೆಯನ್ನು ಗುತ್ತಿಗೆಯ ಮೇಲಿನ ಬಾಕಿ ರೂ.11,14,231/–ನ್ನು ಪಾವತಿಸದೆ ಇದ್ದ ಕಾರಣ ರದ್ದುಗೊಳಿಸುತ್ತಿರುವ ಬಗ್ಗೆ.

**ಉಲ್ಲೇಖ:**1) ಅಂತಿಮ ನೋಟೀಸು ಪತ್ರ ಸಂಖ್ಯೆ: ಗಭೂಇ/ ಡಿಸಿಬಿ/ ಕಗಗು/ 782/2007–08/5891, ದಿನಾಂಕ: 08.01.2008.

**ಪ್ರಸ್ತಾವನೆ:**

ಹಾಸನ ಜಿಲ್ಲೆ, ಆಲೂರು ತಾಲ್ಲೂಕು, ಮಾದಿಹಳ್ಳಿ ಗ್ರಾಮದ ಸರ್ವೆ ನಂ.01ರಲ್ಲಿ ಮೆ: ಜೂಂ ಮಿನರಲ್, ಡೆವಲಪ್‌ಮೆಂಟ್ (ಪ್ರೈ) ಲಿಮಿಟೆಡ್ ರವರಿಗೆ 20 ಎಕರೆಗೆ ದಿನಾಂಕ:22.12.2006 ರಿಂದ 10 ವರ್ಷಗಳಿಗಾಗಿ ಕಲ್ಲುಗಣಿ ಗುತ್ತಿಗೆ ಸಂಖ್ಯೆ:782ನ್ನು ಮಂಜೂರು ಮಾಡಲಾಗಿತ್ತು. ಈ ಕಛೇರಿಯ ಅಂತಿಮ ನೋಟೀಸು ಸಂಖ್ಯೆ:ಗಭೂಇ/ಡಿಸಿಬಿ/ಕಗಗು/782/08–09, ದಿನಾಂಕ:21.02.2009ರಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ 2007–08ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ.4,91,763/– ಗಳನ್ನು 60 ದಿನಗಳೊಳಗೆ ಸಂದಾಯಿಸುವಂತೆ ಹಾಗೂ ಗಣಿಗಾರಿಕೆ ಕೈಗೊಳ್ಳದೆ ಒಂದು ವರ್ಷಕ್ಕಿಂತ ಹೆಚ್ಚಿನ ಅವಧಿಗೆ ನಿಷ್ಕ್ರೀಯವಾಗಿ ಇಟ್ಟ ಬಗ್ಗೆ ಸಮಜಾಯಿಸಿ ಕೇಳಿ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ಹಾಗೂ ನಿಯಮ 39ರಡಿ ನೋಟೀಸ್ ಜಾರಿಗೊಳಿಸಲಾಗಿತ್ತು. ಆದರೆ ಸದರಿ ಗುತ್ತಿಗೆದಾರರಿಂದ ಇದುವರೆವಿಗೂ ಬಾಕಿ ಪಾವತಿಯಾಗಿರುವುದಿಲ್ಲ. ಹಾಗೂ ಗುತ್ತಿಗೆಯು ನಿಷ್ಕ್ರಿಯವಾಗಿರುವುದಾಗಿ ಹಿರಿಯ ಭೂವಿಜ್ಞಾನಿ, ಹಾಸನ ತಮ್ಮ ಪತ್ರ ದಿನಾಂಕ:08.09.2009ರಂದು ವರದಿ ಮಾಡಿರುತ್ತಾರೆ.

ಗಣಿ ಮತ್ತು ಭೂವಿಜ್ಞಾನ ಇಲಾಖೆಯ, ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ನೋಟೀಸು ಪತ್ರಕ್ಕೆ ಯಾವ ರೀತಿಯು ಸ್ಪಂದಿಸಿರುವುದಿಲ್ಲವಾದ ಕಾರಣ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ಹಾಗೂ ನಿಯಮ 39ರಡಿ ಸರ್ಕಾರದ ಅಧಿಸೂಚನೆ–III ಸಂಖ್ಯೆ:ಸಿಐ 418 ಎಂ.ಆರ್.ಸಿ.92 ದಿನಾಂಕ:02.07.1994 ಪ್ರತ್ಯೋಜಿಸಿರುವ ಅಧಿಕಾರದಂತೆ ಕಲ್ಲುಗಣಿ ಗುತ್ತಿಗೆ ಸಂಖ್ಯೆ:782ನ್ನು ರದ್ದುಗೊಳಿಸಲು ಕ್ರಮಜರುಗಿಸುವುದು ಅವಶ್ಯಕವಾದ್ದರಿಂದ ಈ ಕೆಳಗಿನಂತೆ ಆದೇಶ.

**ಆದೇಶ**

**ಸಂಖ್ಯೆ:ಗಭೂಇ:ಡಿಸಿಬಿ:ಕಗಗು/782/09–10/14269, ದಿನಾಂಕ:1ನೇ ಫೆಬ್ರವರಿ, 2010**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ಹಾಗೂ ನಿಯಮ 39ರಂತೆ ಗಣಿ ಮತ್ತು ಭೂವಿಜ್ಞಾನ ಇಲಾಖೆಯ, ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಹಾಸನ ಜಿಲ್ಲೆ, ಆಲೂರು ತಾಲ್ಲೂಕು, ಮಾದಿಹಳ್ಳಿ ಗ್ರಾಮದ ಸರ್ವೆ ನಂ.01ರಲ್ಲಿ 10–00 ಎಕರೆಗೆ ಕಪ್ಪು ಗ್ರಾನೈಟ್‌ಗಾಗಿ ನೀಡಿದ್ದ ಕಲ್ಲು ಗಣಿಗುತ್ತಿಗೆ ಸಂಖ್ಯೆ:782ನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ಧುಪಡಿಸಲಾಗಿದೆ ಹಾಗೂ ಈ ಗುತ್ತಿಗೆಗೆ ಸಲ್ಲಿಸಿದ್ದ ಭದ್ರತಾ ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ಪಿ.ಆರ್.261 ನಿರ್ದೇಶಕರು.

**ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿ**

**ವಿಷಯ:** ಕೋಲಾರ ಜಿಲ್ಲೆ, ಕೋಲಾರ ತಾಲ್ಲೂಕು, ಚುಂಚನದೇನಹಳ್ಳಿ ಗ್ರಾಮದಲ್ಲಿ ಕಪ್ಪು ಗ್ರಾನೈಟ್‌ಗಾಗಿ ಮೆ:ಸಪ್ತಗಿರಿ ಗ್ರಾನೈಟ್ಸ್ ರವರಿಗೆ ಮಂಜೂರಾಗಿದ್ದ ಕಲ್ಲುಗಣಿ ಗುತ್ತಿಗೆ ಸಂಖ್ಯೆ:701ರ ಗುತ್ತಿಗೆಯನ್ನು ಗುತ್ತಿಗೆಯ ಮೇಲಿನ ಬಾಕಿ ರೂ.1,48,257/–ನ್ನು ಪಾವತಿಸದೆ ಇದ್ದ ಕಾರಣ ರದ್ದುಗೊಳಿಸುತ್ತಿರುವ ಬಗ್ಗೆ.

**ಉಲ್ಲೇಖ:**1) ಕ.ಊ.ಖ.ರಿ.ನಿ.94ರ ನಿಯಮ 39ರಡಿ ಕಛೇರಿಯಿಂದ ಜಾರಿಯಾದ ಅಂತಿಮ ನೋಟೀಸ್ ಸಂಖ್ಯೆ:ಗಭೂಇ/ಡಿಸಿಬಿ/ಕಗಗು/701/08–09/5781, ದಿನಾಂಕ:03.03.2009.

2) ಹಿರಿಯ ಭೂವಿಜ್ಞಾನಿ, ಕೋಲಾರ ರವರ ಪತ್ರ ಸಂಖ್ಯೆ:3686/ ಗಭೂಇ/ಡಿಸಿಬಿ/ಕಗಗು/701/09–10, ದಿನಾಂಕ:18.07.2009.

**ಪ್ರಸ್ತಾವನೆ:**

ಕೋಲಾರ ಜಿಲ್ಲೆ, ಕೋಲಾರ ತಾಲ್ಲೂಕು, ಚುಂಚನದೇನಹಳ್ಳಿ ಗ್ರಾಮದ ಸರ್ವೆ ನಂ.19ರಲ್ಲಿ ಮೆ:ಸಪ್ತಗಿರಿ ಗ್ರಾನೈಟ್ಸ್ ರವರಿಗೆ 2.10 ಎಕರೆಗೆ ದಿನಾಂಕ:01.04.2005 ರಿಂದ 10 ವರ್ಷಗಳಿಗಾಗಿ ಕಲ್ಲುಗಣಿ ಗುತ್ತಿಗೆ ಸಂಖ್ಯೆ:701ನ್ನು ಮಂಜೂರು ಮಾಡಲಾಗಿತ್ತು. ಈ ಕಛೇರಿಯ ಅಂತಿಮ ನೋಟೀಸು ಸಂಖ್ಯೆ:ಗಭೂಇ/ಡಿಸಿಬಿ/ಕಗಗು/701//5781/08–09, ದಿನಾಂಕ:03.03.2009ರಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ 2008ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ.81,557/– ಗಳನ್ನು 60 ದಿನಗಳೊಳಗೆ ಸಂದಾಯಿಸುವಂತೆ ಹಾಗೂ ಗಣಿಗಾರಿಕೆ ಕೈಗೊಳ್ಳದೆ ಗುತ್ತಿಗೆಯು ಮಂಜೂರು ಆದಾಗಿನಿಂದಲೂ ನಿಷ್ಕ್ರೀಯವಾಗಿ ಇಟ್ಟ ಬಗ್ಗೆ ಸಮಜಾಯಿಸಿ ಕೇಳಿ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39ರಡಿ ನೋಟೀಸ್ ಜಾರಿಗೊಳಿಸಲಾಗಿತ್ತು. ಆದರೆ ಸದರಿ ಗುತ್ತಿಗೆದಾರರಿಂದ ಇದುವರೆವಿಗೂ ಬಾಕಿ ಪಾವತಿಯಾಗಿರುವುದಿಲ್ಲ. ಹಾಗೂ ಪ್ರಸಕ್ತ ಸಾಲಿನಲ್ಲಿ ಗುತ್ತಿಗೆಯು ನಿಷ್ಕ್ರಿಯವಾಗಿರುವುದಾಗಿ ಹಿರಿಯ ಭೂವಿಜ್ಞಾನಿ, ಕೋಲಾರ ರವರು ವರದಿ ಮಾಡಿರುತ್ತಾರೆ.

ಗಣಿ ಮತ್ತು ಭೂವಿಜ್ಞಾನ ಇಲಾಖೆಯ, ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ನೋಟೀಸು ಪತ್ರಕ್ಕೆ ಯಾವ ರೀತಿಯು ಸ್ಪಂದಿಸಿರುವುದಿಲ್ಲವಾದ ಕಾರಣ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39ರಡಿ ಸರ್ಕಾರದ ಅಧಿಸೂಚನೆ–III ಸಂಖ್ಯೆ:ಸಿಐ 418 ಎಂ.ಆರ್.ಸಿ.92 ದಿನಾಂಕ:02.07.1994 ಪ್ರತ್ಯೋಜಿಸಿರುವ ಅಧಿಕಾರದಂತೆ ಕಲ್ಲುಗಣಿ ಗುತ್ತಿಗೆ ಸಂಖ್ಯೆ:701ರಡಿ ಕ್ರಮಜರುಗಿಸುವುದು ಅವಶ್ಯಕವಾದ್ದರಿಂದ ಈ ಕೆಳಗಿನಂತೆ ಆದೇಶ.

**ಆದೇಶ**

**ಸಂಖ್ಯೆ:ಗಭೂಇ:ಡಿಸಿಬಿ:ಕಗಗು/701/09–10, ದಿನಾಂಕ:18ನೇ ಫೆಬ್ರವರಿ, 2010**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39ರಂತೆ ಗಣಿ ಮತ್ತು ಭೂವಿಜ್ಞಾನ ಇಲಾಖೆಯ, ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಕೋಲಾರ ಜಿಲ್ಲೆ, ಕೋಲಾರ ತಾಲ್ಲೂಕು, ಚುಂಚುನದೇನಹಳ್ಳಿ ಗ್ರಾಮದ ಸರ್ವೆ ನಂ.19ರಲ್ಲಿ 2.10 ಎಕರೆಗೆ ಕಪ್ಪು ಗ್ರಾನೈಟ್‌ಗಾಗಿ ನೀಡಿದ್ದ ಕಲ್ಲು ಗಣಿಗುತ್ತಿಗೆ ಸಂಖ್ಯೆ:701ನ್ನು ತಕ್ಷಣದಿಂದ ಜಾರಿಗೆ ಬರುವಂತೆ ಗುತ್ತಿಗೆಯನ್ನು ರದ್ಧುಪಡಿಸಲಾಗಿದೆ ಹಾಗೂ ಈ ಗುತ್ತಿಗೆಗೆ ಸಲ್ಲಿಸಿದ್ದ ಭದ್ರತಾ ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ಪಿ.ಆರ್.296 ನಿರ್ದೇಶಕರು.

**ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿ**

**ವಿಷಯ:** ಕೋಲಾರ ಜಿಲ್ಲೆ, ಮುಳಬಾಗಿಲು ತಾಲ್ಲೂಕು, ನಂಗಲಿ ಗ್ರಾಮದಲ್ಲಿ ಕಪ್ಪು ಗ್ರಾನೈಟ್‌ಗಾಗಿ ಶ್ರೀ ಎಲ್. ನಟರಾಜನ್ ರವರಿಗೆ ಮಂಜೂರಾಗಿದ್ದ ಕಲ್ಲುಗಣಿ ಗುತ್ತಿಗೆ ಸಂಖ್ಯೆ:665ರ ಗುತ್ತಿಗೆಯನ್ನು ಗುತ್ತಿಗೆಯ ಮೇಲಿನ ಬಾಕಿ ರೂ.1,79,894/–ನ್ನು ಪಾವತಿಸದೆ ಇದ್ದ ಕಾರಣ ರದ್ದುಗೊಳಿಸುತ್ತಿರುವ ಬಗ್ಗೆ.

**ಉಲ್ಲೇಖ:**1) ಕ.ಊ.ಖ.ರಿ.ನಿ.94ರ ನಿಯಮ 39ರಡಿ ಕಛೇರಿಯಿಂದ ಜಾರಿಯಾದ ಅಂತಿಮ ನೋಟೀಸ್ ಸಂಖ್ಯೆ:ಗಭೂಇ/ಡಿಸಿಬಿ/ಕಗಗು/665/08–09/5775, ದಿನಾಂಕ:03.03.2009.

2) ಹಿರಿಯ ಭೂವಿಜ್ಞಾನಿ, ಕೋಲಾರ ರವರ ಪತ್ರ ಸಂಖ್ಯೆ:3698/ ಗಭೂಇ/ಡಿಸಿಬಿ/ಕಗಗು/665/09–10, ದಿನಾಂಕ:18.07.2009.

**ಪ್ರಸ್ತಾವನೆ:**

ಕೋಲಾರ ಜಿಲ್ಲೆ, ಮುಳಬಾಗಿಲು ತಾಲ್ಲೂಕು, ನಂಗಲಿ ಗ್ರಾಮದ ಸರ್ವೆ ನಂ.447ರಲ್ಲಿ ಶ್ರೀ ಎಲ್. ನಟರಾಜನ್ ರವರಿಗೆ 3.20 ಎಕರೆಗೆ ದಿನಾಂಕ:25.08.2004 ರಿಂದ 10 ವರ್ಷಗಳಿಗಾಗಿ ಕಲ್ಲುಗಣಿ ಗುತ್ತಿಗೆ ಸಂಖ್ಯೆ:665ನ್ನು ಮಂಜೂರು ಮಾಡಲಾಗಿತ್ತು. ಈ ಕಛೇರಿಯ ಅಂತಿಮ ನೋಟೀಸು ಸಂಖ್ಯೆ:ಗಭೂಇ/ಡಿಸಿಬಿ/ಕಗಗು/665//5775/08–09, ದಿನಾಂಕ:03.03.2009ರಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ 2008ರ ಮಾರ್ಚ್ ಅಂತ್ಯದವರೆಗೆ ಬಾಕಿ

ರೂ.82,099/- ಗಳನ್ನು 60 ದಿನಗಳೊಳಗೆ ಸಂದಾಯಿಸುವಂತೆ ಸೂಚಿಸಿ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39ರಡಿ ನೋಟೀಸ್ ಜಾರಿಗೊಳಿಸಲಾಗಿತ್ತು. ಆದರೆ ಸದರಿ ಗುತ್ತಿಗೆದಾರರಿಂದ ಇದುವರೆವಿಗೂ ಬಾಕಿ ಪಾವತಿಯಾಗಿರುವುದಿಲ್ಲ. ಹಾಗೂ ಪ್ರಸಕ್ತ ಸಾಲಿನಲ್ಲಿ ಗುತ್ತಿಗೆಯು ನಿಷ್ಕ್ರಿಯವಾಗಿರುವುದಾಗಿ ಹಿರಿಯ ಭೂವಿಜ್ಞಾನಿ, ಕೋಲಾರ ರವರು ವರದಿ ಮಾಡಿರುತ್ತಾರೆ.

ಗಣಿ ಮತ್ತು ಭೂವಿಜ್ಞಾನ ಇಲಾಖೆಯ, ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ನೋಟೀಸು ಪತ್ರಕ್ಕೆ ಯಾವ ರೀತಿಯು ಸ್ಪಂದಿಸಿರುವುದಿಲ್ಲವಾದ ಕಾರಣ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39ರಡಿ ಸರ್ಕಾರದ ಅಧಿಸೂಚನೆ-III ಸಂಖ್ಯೆ:ಸಿಐ 418 ಎಂ.ಆರ್.ಸಿ.92 ದಿನಾಂಕ:02.07.1994 ಪ್ರತ್ಯೋಜಿಸಿರುವ ಅಧಿಕಾರದಂತೆ ಕಲ್ಲುಗಣಿ ಗುತ್ತಿಗೆ ಸಂಖ್ಯೆ:665ರಡಿ ಕ್ರಮಜರುಗಿಸುವುದು ಅವಶ್ಯಕವಾದ್ದರಿಂದ ಈ ಕೆಳಗಿನಂತೆ ಆದೇಶ.

**ಆದೇಶ**

**ಸಂಖ್ಯೆ:ಗಭೂಇ:ಡಿಸಿಬಿ:ಕಗಗು/665/09-10, ದಿನಾಂಕ:18ನೇ ಫೆಬ್ರವರಿ, 2010**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39ರಂತೆ ಗಣಿ ಮತ್ತು ಭೂವಿಜ್ಞಾನ ಇಲಾಖೆಯ, ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಕೋಲಾರ ಜಿಲ್ಲೆ, ಮುಳಬಾಗಿಲು ತಾಲ್ಲೂಕು, ನಂಗಲಿ ಗ್ರಾಮದ ಸರ್ವೆ ನಂ.447ರಲ್ಲಿ 3.20 ಎಕರೆಗೆ ಕಪ್ಪು ಗ್ರಾನೈಟ್‌ಗಾಗಿ ನೀಡಿದ್ದ ಕಲ್ಲು ಗಣಿಗುತ್ತಿಗೆ ಸಂಖ್ಯೆ:665ನ್ನು ತಕ್ಷಣದಿಂದ ಜಾರಿಗೆ ಬರುವಂತೆ ಗುತ್ತಿಗೆಯನ್ನು ರದ್ದುಪಡಿಸಲಾಗಿದೆ ಹಾಗೂ ಈ ಗುತ್ತಿಗೆಗೆ ಸಲ್ಲಿಸಿದ್ದ ಭದ್ರತಾ ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ಪಿ.ಆರ್.297 ನಿರ್ದೇಶಕರು.

**ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿ**

**ವಿಷಯ:** ಬಾಗಲಕೋಟೆ ಜಿಲ್ಲೆ, ಹುನಗುಂದ ತಾಲ್ಲೂಕು, ಹಿರೇಕೊಡಗಲಿ ಗ್ರಾಮದಲ್ಲಿ ಪಿಂಕ್ ಗ್ರಾನೈಟ್‌ಗಾಗಿ ಮೆ॥ ಮಧುಕನ ಗ್ರಾನೈಟ್ಸ್ ಪ್ರೈ. ಲಿಮಿಟೆಡ್‌ಗೆ ಮಂಜೂರಾಗಿದ್ದ ಕಲ್ಲುಗಣಿ ಗುತ್ತಿಗೆ ಸಂಖ್ಯೆ:581ರ ಗುತ್ತಿಗೆಯನ್ನು ಗುತ್ತಿಗೆಯ ಮೇಲಿನ ಬಾಕಿ ರೂ.1,24,548/-ನ್ನು ಪಾವತಿಸದೆ ಇದ್ದ ಕಾರಣ ರದ್ದುಗೊಳಿಸುತ್ತಿರುವ ಬಗ್ಗೆ.

**ಉಲ್ಲೇಖ:**1) ಕಛೇರಿ ನೋಟಿಸ್ ಪತ್ರ ಸಂಖ್ಯೆ:ಗಭೂಇ/ಡಿಸಿಬಿ/ಕಗಗು/581/08-09/4275, ದಿನಾಂಕ:05.01.2009.
2) ಉಪ ನಿರ್ದೇಶಕರು, ಇಳಕಲ್ ರವರ ಪತ್ರ ಸಂಖ್ಯೆ:1104/ಗಭೂಇ/ಡಿಸಿಬಿ/ಕಗಗು/581/09-10, ದಿನಾಂಕ:20.07.2009.

**ಪ್ರಸ್ತಾವನೆ:**

ಬಾಗಲಕೋಟೆ ಜಿಲ್ಲೆ, ಹುನಗುಂದ ತಾಲ್ಲೂಕು, ಹಿರೇಕೊಡಗಲಿ ಗ್ರಾಮದ ಸರ್ವೆ ನಂ.92/4/1 & 92/4/2ರಲ್ಲಿ ಮೆ॥ ಮಧುಕನ ಗ್ರಾನೈಟ್ಸ್ ಪ್ರೈ.ಲಿಮಿಟೆಡ್ ರವರಿಗೆ 4.18 ಎಕರೆಗೆ ದಿನಾಂಕ:11.04.2003 ರಿಂದ 10 ವರ್ಷಗಳಿಗಾಗಿ ಕಲ್ಲುಗಣಿ ಗುತ್ತಿಗೆ ಸಂಖ್ಯೆ:581ನ್ನು ಮಂಜೂರು ಮಾಡಲಾಗಿತ್ತು. ಈ ಕಛೇರಿಯ ಅಂತಿಮ ನೋಟೀಸು ಸಂಖ್ಯೆ:ಗಭೂಇ/ಡಿಸಿಬಿ/ಕಗಗು/581/08-09/5014, ದಿನಾಂಕ:05.01.2009ರಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ 2009ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ.1,24,548/- ಗಳನ್ನು 60 ದಿನಗಳೊಳಗೆ ಸಂದಾಯಿಸುವಂತೆ ಹಾಗೂ ಗಣಿಗಾರಿಕೆ ಕೈಗೊಳ್ಳದೆ ನಿಷ್ಕ್ರಿಯವಾಗಿ ಇಟ್ಟ ಬಗ್ಗೆ ಸಮಜಾಯಿಸಿ ಕೇಳಿ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39ರಡಿ ನೋಟೀಸ್ ಜಾರಿಗೊಳಿಸಲಾಗಿತ್ತು. ಆದರೆ ಸದರಿ ಗುತ್ತಿಗೆದಾರರಿಂದ ಇದುವರೆವಿಗೂ ಬಾಕಿ ಪಾವತಿಯಾಗಿರುವುದಿಲ್ಲ. ಹಾಗೂ ಗುತ್ತಿಗೆಯು ನಿಷ್ಕ್ರಿಯವಾಗಿರುವುದಾಗಿ ಉಪ ನಿರ್ದೇಶಕರು ಇಳಕಲ್ ರವರು ವರದಿ ಮಾಡಿರುತ್ತಾರೆ.

ಗಣಿ ಮತ್ತು ಭೂವಿಜ್ಞಾನ ಇಲಾಖೆಯ, ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ನೋಟೀಸು ಪತ್ರಕ್ಕೆ ಗುತ್ತಿಗೆದಾರರು ಯಾವ ರೀತಿಯು ಸ್ಪಂದಿಸಿರುವುದಿಲ್ಲವಾದ ಕಾರಣ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39ರಡಿ ಸರ್ಕಾರದ ಅಧಿಸೂಚನೆ-III ಸಂಖ್ಯೆ:ಸಿಐ 418 ಎಂ.ಆರ್.ಸಿ.92 ದಿನಾಂಕ:02.07.1994 ಪ್ರತ್ಯೋಜಿಸಿರುವ ಅಧಿಕಾರದಂತೆ ಕಲ್ಲುಗಣಿ ಗುತ್ತಿಗೆ ಸಂಖ್ಯೆ:581ರಡಿ ಕ್ರಮಜರುಗಿಸುವುದು ಅವಶ್ಯಕವಾದ್ದರಿಂದ ಈ ಕೆಳಗಿನಂತೆ ಆದೇಶ.

**ಆದೇಶ**

**ಸಂಖ್ಯೆ:ಗಭೂಇ:ಡಿಸಿಬಿ:ಕಗಗು/581/09-10, ದಿನಾಂಕ:18ನೇ ಫೆಬ್ರವರಿ, 2010**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39ರಂತೆ ಗಣಿ ಮತ್ತು ಭೂವಿಜ್ಞಾನ ಇಲಾಖೆಯ, ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಬಾಗಲಕೋಟೆ ಜಿಲ್ಲೆ, ಹುನಗುಂದ ತಾಲ್ಲೂಕು, ಹಿರೇಕೊಡಗಲಿ ಗ್ರಾಮದ ಸರ್ವೆ ನಂ.92/4/1 & 92/4/2ರಲ್ಲಿ 4.18 ಎಕರೆಗೆ ಪಿಂಕ್ ಗ್ರಾನೈಟ್‌ಗಾಗಿ ನೀಡಿದ್ದ ಕಲ್ಲು ಗಣಿಗುತ್ತಿಗೆ ಸಂಖ್ಯೆ:581ನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ ಹಾಗೂ ಈ ಗುತ್ತಿಗೆಗೆ ಸಲ್ಲಿಸಿದ್ದ ಭದ್ರತಾ ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ಪಿ.ಆರ್.298 ನಿರ್ದೇಶಕರು.

**ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿ**

**ವಿಷಯ:** ಹಾಸನ ಜಿಲ್ಲೆ, ಸಕಲೇಶಪುರ ತಾಲ್ಲೂಕು, ನಾರೂರು ಗ್ರಾಮದಲ್ಲಿ ಕಪ್ಪು ಗ್ರಾನೈಟ್‌ಗಾಗಿ ಮೆ: ಜೆ.ಕೆ. ಸ್ಟೋನ್ಸ್ ರವರಿಗೆ ಮಂಜೂರಾಗಿದ್ದ ಕಲ್ಲುಗಣಿ ಗುತ್ತಿಗೆ ಸಂಖ್ಯೆ:757ರ ಗುತ್ತಿಗೆಯನ್ನು ಗುತ್ತಿಗೆಯ ಮೇಲಿನ ಬಾಕಿ ರೂ.2,60,652/–ನ್ನು ಪಾವತಿಸದೆ ಇದ್ದ ಕಾರಣ ರದ್ದುಗೊಳಿಸುತ್ತಿರುವ ಬಗ್ಗೆ.

**ಉಲ್ಲೇಖ:**1) ಕ.ಊ.ಖ.ರಿ.ನಿ.94ರ ನಿಯಮ 6(1) ಮತ್ತು ನಿಯಮ 39ರಡಿ ಈ ಕಛೇರಿಯಿಂದ ಜಾರಿಯಾದ ಅಂತಿಮ ನೋಟೀಸ್ ಸಂಖ್ಯೆ:ಗಭೂಇ/ಡಿಸಿಬಿ/ಕಗಗು/757/08–09/5016, ದಿನಾಂಕ:09.02.2009.

2) ಹಿರಿಯ ಭೂವಿಜ್ಞಾನಿ, ಹಾಸನ ರವರ ಪತ್ರ ಸಂಖ್ಯೆ:2491/ ಗಭೂಇ/ಡಿಸಿಬಿ/ಕಗಗು/757/09–10, ದಿನಾಂಕ:08.09.2009.

**ಪ್ರಸ್ತಾವನೆ:**

ಹಾಸನ ಜಿಲ್ಲೆ, ಸಕಲೇಶಪುರ ತಾಲ್ಲೂಕು, ನಾರೂರು ಗ್ರಾಮದ ಸರ್ವೆ ನಂ.66ರಲ್ಲಿ ಮೆ: ಜೆ.ಕೆ. ಸ್ಟೋನ್ಸ್ ರವರಿಗೆ 3.00 ಎಕರೆಗೆ ದಿನಾಂಕ:04.02.2006 ರಿಂದ 10 ವರ್ಷಗಳಿಗಾಗಿ ಕಲ್ಲುಗಣಿ ಗುತ್ತಿಗೆ ಸಂಖ್ಯೆ:757ನ್ನು ಮಂಜೂರು ಮಾಡಲಾಗಿತ್ತು. ಈ ಕಛೇರಿಯ ಅಂತಿಮ ನೋಟೀಸು ಸಂಖ್ಯೆ:ಗಭೂಇ/ಡಿಸಿಬಿ/ಕಗಗು/757/08–09/5016, ದಿನಾಂಕ:09.02.2009ರಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ 2008ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ.1,50,446/– ಗಳನ್ನು 60 ದಿನಗಳೊಳಗೆ ಸಂದಾಯಿಸುವಂತೆ ಹಾಗೂ ಗಣಿಗಾರಿಕೆ ಕೈಗೊಳ್ಳದೆ ಗುತ್ತಿಗೆಯು ಮಂಜೂರು ಆದಾಗಿನಿಂದಲೂ ನಿಷ್ಕ್ರೀಯವಾಗಿ ಇಟ್ಟ ಬಗ್ಗೆ ಸಮಜಾಯಿಸಿ ಕೇಳಿ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ಹಾಗೂ ನಿಯಮ 39ರಡಿ ನೋಟೀಸ್ ಜಾರಿಗೊಳಿಸಲಾಗಿತ್ತು. ಆದರೆ ಸದರಿ ಗುತ್ತಿಗೆದಾರರಿಂದ ಇದುವರೆವಿಗೂ ಬಾಕಿ ಪಾವತಿಯಾಗಿರುವುದಿಲ್ಲ. ಹಾಗೂ ಗುತ್ತಿಗೆಯು ನಿಷ್ಕ್ರಿಯವಾಗಿರುವುದಾಗಿ ಹಿರಿಯ ಭೂವಿಜ್ಞಾನಿ, ಹಾಸನ ರವರು ವರದಿ ಮಾಡಿರುತ್ತಾರೆ.

ಗಣಿ ಮತ್ತು ಭೂವಿಜ್ಞಾನ ಇಲಾಖೆಯ, ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ನೋಟೀಸು ಪತ್ರಕ್ಕೆ ಗುತ್ತಿಗೆದಾರರು ಯಾವ ರೀತಿಯು ಸ್ಪಂದಿಸಿರುವುದಿಲ್ಲವಾದ ಕಾರಣ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39ರಡಿ ಸರ್ಕಾರದ ಅಧಿಸೂಚನೆ–III ಸಂಖ್ಯೆ:ಸಿಐ 418 ಎಂ.ಆರ್.ಸಿ.92 ದಿನಾಂಕ:02.07.1994 ಪ್ರತ್ಯೋಜಿಸಿರುವ ಅಧಿಕಾರದಂತೆ ಕಲ್ಲುಗಣಿ ಗುತ್ತಿಗೆ ಸಂಖ್ಯೆ:757ರಡಿ ಕ್ರಮಜರುಗಿಸುವುದು ಅವಶ್ಯಕವಾದ್ದರಿಂದ ಈ ಕೆಳಗಿನಂತೆ ಆದೇಶ.

**ಆದೇಶ**

**ಸಂಖ್ಯೆ:ಗಭೂಇ:ಡಿಸಿಬಿ:ಕಗಗು/757/09–10, ದಿನಾಂಕ:18ನೇ ಫೆಬ್ರವರಿ, 2010**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39ರಂತೆ ಗಣಿ ಮತ್ತು ಭೂವಿಜ್ಞಾನ ಇಲಾಖೆಯ, ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಹಾಸನ ಜಿಲ್ಲೆ, ಸಕಲೇಶಪುರ ತಾಲ್ಲೂಕು, ನಾರೂರು ಗ್ರಾಮದ ಸರ್ವೆ ನಂ.66ರಲ್ಲಿ 3.00 ಎಕರೆಗೆ ಕಪ್ಪು ಗ್ರಾನೈಟ್‌ಗಾಗಿ ನೀಡಿದ್ದ ಕಲ್ಲು ಗಣಿಗುತ್ತಿಗೆ ಸಂಖ್ಯೆ:757ನ್ನು ತಕ್ಷಣದಿಂದ ಜಾರಿಗೆ ಬರುವಂತೆ ಗುತ್ತಿಗೆಯನ್ನು ರದ್ಧುಪಡಿಸಲಾಗಿದೆ ಹಾಗೂ ಈ ಗುತ್ತಿಗೆಗೆ ಸಲ್ಲಿಸಿದ್ದ ಭದ್ರತಾ ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ಪಿ.ಆರ್.299 ನಿರ್ದೇಶಕರು.

**ಜಲಾನಯನ ಅಭಿವೃದ್ಧಿ ಇಲಾಖೆಯ ರಾಮನಗರ ಜಿಲ್ಲೆಗೆ ಸಂಬಂಧಿಸಿದ ಸಾರ್ವಜನಿಕ ಪ್ರಾಧಿಕಾರಗಳ ಕಛೇರಿಗಳು, ಸಾರ್ವಜನಿಕ ಮಾಹಿತಿ ಅಧಿಕಾರಿ, ಸಹಾಯಕ ಸಾರ್ವಜನಿಕ ಅಧಿಕಾರಿ, ಮೇಲ್ಮನವಿ ಪ್ರಾಧಿಕಾರಗಳ ವಿವರ ಪಟ್ಟಿ**

**ತಿದ್ದುಪಡಿ ಮಾಡಿರುವ ಮಾಹಿತಿ ಪತ್ರ**

**ಈಗ ಪ್ರಕಟ ಮಾಡಬೇಕಾಗಿರುವ ಪಟ್ಟಿ**

| ಕ್ರಮ ಸಂಖ್ಯೆ | ಸಾರ್ವಜನಿಕ ಪ್ರಾಧಿಕಾರಿಗಳ ಕಛೇರಿಗಳು | ಸಾರ್ವಜನಿಕ ಮಾಹಿತಿ ಅಧಿಕಾರಿ | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ | ಮೇಲ್ಮನವಿ ಪ್ರಾಧಿಕಾರ |
|---|---|---|---|---|
| 1. | ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿಗಳ ಕಛೇರಿ, ಜಲಾನಯನ ಅಭಿವೃದ್ಧಿ ಇಲಾಖೆ, ರಾಮನಗರ. | ಶ್ರೀ ಡಾ: ಬಿ.ಎಸ್. ಚಂದ್ರಶೇಖರ್, ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿಗಳು, ರಾಮನಗರ, ದೂರವಾಣಿ ಸಂಖ್ಯೆ:27276060 | ಶ್ರೀ ವೆಂಕಟೇಶಯ್ಯ, ತಾಂತ್ರಿಕ ಸಹಾಯಕರು, ಸಹಾಯಕ ಕೃಷಿ ಅಧಿಕಾರಿ, (ಪ್ರಭಾರ) ಜಲಾನಯನ ಅಭಿವೃದ್ಧಿ ಇಲಾಖೆ, ರಾಮನಗರ, ದೂರವಾಣಿ ಸಂಖ್ಯೆ:27276060 | ಶ್ರೀ ಕೆ.ಹೆಚ್. ಗೋಪಾಲ ಕೃಷ್ಣೇಗೌಡ, ಆಯುಕ್ತರು, ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು, ದೂರವಾಣಿ ಸಂಖ್ಯೆ:221296601 |

| ಕ್ರಮ ಸಂಖ್ಯೆ | ಸಾರ್ವಜನಿಕ ಪ್ರಾಧಿಕಾರಿಗಳ ಕಛೇರಿಗಳು | ಸಾರ್ವಜನಿಕ ಮಾಹಿತಿ ಅಧಿಕಾರಿ | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ | ಮೇಲ್ಮನವಿ ಪ್ರಾಧಿಕಾರ |
|---|---|---|---|---|
| 2. | ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಜಲಾನಯನ ಅಭಿವೃದ್ಧಿ ಇಲಾಖೆ, ರಾಮನಗರ. | ಶ್ರೀ ಎನ್. ಗೋಪಾಲಗೌಡ ಸಹಾಯಕ ಕೃಷಿ ನಿರ್ದೇಶಕರು (ಜ.ಅ.ಇ.) ರಾಮನಗರ, ದೂರವಾಣಿ ಸಂಖ್ಯೆ:27276060 | ಶ್ರೀ ಎನ್. ನರೇಂದ್ರನಾಥ್, ಕೃಷಿ ಅಧಿಕಾರಿ, ರಾಮನಗರ, ಕೆ.ಹುಚ್ಚಪ್ಪ, ಕೃಷಿ ಅಧಿಕಾರಿ, ಕನಕಪುರ, ಕೆ.ಶಿವರಾಜು, ಕೃಷಿ ಅಧಿಕಾರಿ, ಮಾಗಡಿ, ಬಿ.ಟಿ. ಚಿಕ್ಕಪುಟ್ಟೇಗೌಡ, ಕೃಷಿ ಅಧಿಕಾರಿ, ಚನ್ನಪಟ್ಟಣ. | ಶ್ರೀ ಡಾ:ಬಿ.ಎಸ್. ಚಂದ್ರಶೇಖರ್, ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿಗಳು, ರಾಮನಗರ, ದೂರವಾಣಿ ಸಂಖ್ಯೆ:27276060 |
| 3. | ಸಹಾಯಕ ತೋಟಗಾರಿಕೆ ನಿರ್ದೇಶಕರವರ ಕಛೇರಿ, ಜಲಾನಯನ ಅಭಿವೃದ್ಧಿ ಇಲಾಖೆ, ರಾಮನಗರ. | ಶ್ರೀಮತಿ ಎಂ. ನಾಗರತ್ನಮ್ಮ, ಸಹಾಯಕ ತೋಟಗಾರಿಕೆ, ನಿರ್ದೇಶಕರು, ಜ.ಅ.ಇ. ರಾಮನಗರ, ದೂರವಾಣಿ ಸಂಖ್ಯೆ:27276060 | ಶ್ರೀ ಸಿದ್ದರಾಜು, ಸಹಾಯಕ ತೋಟಗಾರಿಕೆ ಅಧಿಕಾರಿ, ಜ.ಅ.ಇ. ರಾಮನಗರ, ದೂರವಾಣಿ ಸಂಖ್ಯೆ:27276060 | ಶ್ರೀ ಡಾ:ಬಿ.ಎಸ್. ಚಂದ್ರಶೇಖರ್, ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿಗಳು, ರಾಮನಗರ, ದೂರವಾಣಿ ಸಂಖ್ಯೆ:27276060 |
| 4. | ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಜಲಾನಯನ ಅಭಿವೃದ್ಧಿ ಇಲಾಖೆ, ರಾಮನಗರ. | ಶ್ರೀ ಬಿ. ಪುಟ್ಟೇಗೌಡ, ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು, ಜ.ಅ.ಇ., ರಾಮನಗರ, ದೂರವಾಣಿ ಸಂಖ್ಯೆ:27276060 | ಶ್ರೀ ವೆಂಕಟರಾಜು, ವಲಯ ಅರಣ್ಯಾಧಿಕಾರಿಗಳು, ಜ.ಅ.ಇ., ರಾಮನಗರ, ದೂರವಾಣಿ ಸಂಖ್ಯೆ:27276060 | ಶ್ರೀ ಡಾ:ಬಿ.ಎಸ್. ಚಂದ್ರಶೇಖರ್, ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿಗಳು, ರಾಮನಗರ, ದೂರವಾಣಿ ಸಂಖ್ಯೆ:27276060 |

ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿಗಳು,

ಪಿ.ಆರ್.615 ಜಲಾನಯನ ಅಭಿವೃದ್ಧಿ ಇಲಾಖೆ, ರಾಮನಗರ.

**ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು**

**ಪಂಚಾಯತ್ ರಾಜ್ ಇಂಜಿನೀಯರಿಂಗ್ ಇಲಾಖೆ**

**ಕಾರ್ಯನಿರ್ವಾಹಕ ಇಂಜಿನೀಯರವರ ಕಛೇರಿ , ಪಂಚಾಯತ್ ರಾಜ್ ಇಂಜಿನೀಯರಿಂಗ್ ಇಲಾಖೆ,**

**ಕೊಪ್ಪಳ ವಿಭಾಗ ಕೊಪ್ಪಳ**

**ಅಧಿಸೂಚನೆ ಸಂಖ್ಯೆ:– ಕಾನಿಇಂ/ಪಂರಾಇ/ಮಾಹಅ/2007–08, ದಿನಾಂಕ:30 ನೇ ಜನವರಿ, 2008**

2005 ರ ಮಾಹಿತಿ ಹಕ್ಕು ಅಧಿನಿಯಮ (2005 ರ ಕೇಂದ್ರ ಕಾಯ್ದೆ 22)ರ ಅಡಿಯಲ್ಲಿ ಕಾರ್ಯನಿರ್ವಾಹಕ ಇಂಜಿನೀಯರ್, ಪಂಚಾಯತ್ ರಾಜ್ ಇಂಜಿನೀಯರಿಂಗ್ ವಿಭಾಗ, ಕೊಪ್ಪಳ ಕಛೇರಿಯನ್ನು ಸಾರ್ವಜನಿಕ ಪ್ರಾಧೀಕಾರವೆಂದು ಪರಿಗಣಿಸಿ ಸದರಿ ಅಧಿನಿಯಮದ ಸೆಕ್ಷನ್–5(1) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡಂತೆ ಅಧಿಕಾರಿಗಳನ್ನು ಸಾರ್ವಜನಿಕ ಮಾಹಿತಿ ಅಧಿಕಾರಿ ಮತ್ತು ಸೆಕ್ಷನ್–5(2) ರಡಿಯಲ್ಲಿ ಸಾರ್ವಜನಿಕ ಸಹಾಯಕ ಮಾಹಿತಿ ಅಧಿಕಾರಿಯನ್ನು ನೇಮಕ ಮಾಡಲಾಗಿದೆ. ಹಾಗೂ ಸೆಕ್ಷನ್–19(1) ರಡಿಯಲ್ಲಿ ಮೇಲ್ಮನವಿ ಪ್ರಾಧಿಕಾರ ಹೊಂದಿರುತ್ತಾರೆ.

| ಅ. ಸಂ | ಕಛೇರಿ ಮತ್ತು ಪೂರ್ಣ ವಿಳಾಸ | ಸಾರ್ವಜನಿಕ ಮಾಹಿತಿ ಅಧಿಕಾರಿ ಸೆಕ್ಷನ್ 5(1) | ಸಾರ್ವಜನಿಕ ಸಹಾಯಕ ಮಾಹಿತಿ ಅಧಿಕಾರಿ ಸೆಕ್ಷನ್ 5(2) | ಮೇಲ್ಮನವಿ ಪ್ರಾಧಿಕಾರ ಸೆಕ್ಷನ್ 19(1) |
|---|---|---|---|---|
| 1. | ಕಾರ್ಯನಿರ್ವಾಹಕ ಇಂಜಿನೀಯರ್ ಪಂಚಾಯತ್ ರಾಜ್.ಇಂಜಿನೀಯರಿಂಗ್ ವಿಭಾಗ ಕೊಪ್ಪಳ. | ಕಾರ್ಯನಿರ್ವಾಹಕ ಇಂಜಿನೀಯರ್ ಪಂಚಾಯತ್ ರಾಜ್.ಇಂಜಿನೀಯರಿಂಗ್ ವಿಭಾಗ, ಕೊಪ್ಪಳ. | ಲೆಕ್ಕ ಪರಿಶೋಧನಾಧಿಕಾರಿಗಳು ಕಾರ್ಯನಿರ್ವಾಹಕ ಇಂಜಿನೀಯರ್ ಪಂಚಾಯತ್ ರಾಜ್ ಇಂಜಿನೀಯರಿಂಗ್ ವಿಭಾಗ, ಕೊಪ್ಪಳ. | ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಜಿಲ್ಲಾ ಪಂಚಾಯತ್ ಕೊಪ್ಪಳ. |

**ಶ್ರೀ ಎಸ್.ಕೆ. ಪಾಟೀಲ್,**
ಕಾರ್ಯನಿರ್ವಾಹಕ ಇಂಜಿನೀಯರ್,
ಪಂಚಾಯತ್ ರಾಜ್ ಇಂಜಿನೀಯರಿಂಗ್ ವಿಭಾಗ ಕೊಪ್ಪಳ.

**ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2005 (ಭಾರತ ಸರ್ಕಾರ)ನಿಯಮಕ್ಕೆ 4(1)ಮತ್ತು 4(ಬಿ) ಪ್ರಕಾರ ಈ ಕೆಳಗಿನಂತೆ ಮಾಹಿತಿಯನ್ನು ಸಾರ್ವಜನಿಕ ಗಮನಕ್ಕೆ ಇಡಲಾಗಿದೆ**

**ಕೈಪಿಡಿ – 1**

**ಸಂಸ್ಥೆಯ ವಿವರಗಳು ಮತ್ತು ಕರ್ತವ್ಯ ವಿಧಿಗಳು:**

ಕರ್ನಾಟಕ ರಾಜ್ಯದಲ್ಲಿನ ಕೊಪ್ಪಳ ಜಿಲ್ಲೆಯ ಪಂಚಾಯತ್ ರಾಜ್ ಇಂಜಿನೀಯರಿಂಗ್ ವಿಭಾಗ ವ್ಯಾಪ್ತಿಯ ರಸ್ತೆಯ ನಿರ್ಮಾಣ ನಿರ್ವಹಣೆ ಮತ್ತು ದುರಸ್ತಿ ಕಾರ್ಯಗಳನ್ನು ಮತ್ತು ಪಂಚಾಯತ್‌ರಾಜ್ ಇಂಜಿನೀಯರಿಂಗ್ ಇಲಾಖೆಯ ಸರಕಾರಿ ಕಛೇರಿಗಳ ಕಟ್ಟಡಗಳ ನಿರ್ಮಾಣ ಹಾಗೂ ನಿರ್ವಹಣೆ ಕೆಲಸಗಳನ್ನು ಹಾಗೂ ಕುಡಿಯುವ ನೀರಿನ ವ್ಯವಸ್ಥೆಯನ್ನು ಸುಗಮವಾಗಿ ಹಾಗೂ ಸುವ್ಯವಸ್ಥಿತವಾಗಿ ನಿರ್ವಹಿಸುವ ದೃಷ್ಟಿಯಿಂದ 1–04–1987 ರಿಂದ ಅಸ್ತಿತ್ವಕ್ಕೆ ಬಂದಿರುತ್ತದೆ.

ಈ ವಿಭಾಗದ ಭೌಗೋಳಿಕ ವಿಸ್ತೀರ್ಣವು. **7189** ಚದರ ಕಿ.ಮೀ ಇರುತ್ತದೆ. ಮತ್ತು 2001 ರ ಜನಗಣತಿಯ ಪ್ರಕಾರ **1196089** ಜನಸಂಖ್ಯೆ ಇದರಲ್ಲಿ ಗ್ರಾಮೀಣ ಜನಸಂಖ್ಯೆ **997797** ನಗರ ಜನ ಸಂಖ್ಯೆ **198292** .ಜನ ಸಂಖ್ಯೆ ಇರುತ್ತದೆ. ಈ ವಿಭಾಗವು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಜಿಲ್ಲಾ ಪಂಚಾಯತ್ ಕೊಪ್ಪಳ ಹಾಗೂ ಅಧೀಕ್ಷಕ ಇಂಜಿನೀಯರ್, ಪಂಚಾಯತ್ ರಾಜ್ ಇಂಜಿನೀಯರಿಂಗ್ ಇಲಾಖೆ ಬಳ್ಳಾರಿ ವೃತ್ತ, ಬಳ್ಳಾರಿ ಹಾಗೂ ಮುಖ್ಯ ಇಂಜಿನೀಯರ್, ಪಂಚಾಯತ್ ರಾಜ್ ಇಂಜಿನೀಯರಿಂಗ್ ಇಲಾಖೆ, ಬೆಂಗಳೂರು ಇವರ ಅಧೀನದಲ್ಲಿ ಕೆಲಸ ನಿರ್ವಹಿಸುತ್ತಿದೆ. ಈ ವಿಭಾಗದಡಿಯಲ್ಲಿ 2009–10 ರ ಪ್ರಕಾರ ರಸ್ತೆ, ಸೇತುವೆ ಮತ್ತು ಕಟ್ಟಡಗಳ ವಿವರ ಹಾಗೂ ಕುಡಿಯುವ ನೀರಿನ ಮಾಹಿತಿಯು ಈ ಕೆಳಗಿನಂತಿರುತ್ತದೆ.

**(ಅ) ರಸ್ತೆಗಳು**

| | | |
|---|---|---|
| (1)ಗ್ರಾಮೀಣ ರಸ್ತೆಗಳು | ಕಿ.ಮೀ. | 1777.60 |

**(ಬ) ಸೇತುವೆಗಳು**

| | | |
|---|---|---|
| 1) ಸಣ್ಣ ಸೇತುವೆಗಳು | ನಂ. | 102 |
| 2) ಅಡ್ಡ ಮೋರಿಗಳು | ನಂ. | 240 |

**(ಕ) ಕಟ್ಟಡಗಳು**

| | | |
|---|---|---|
| 1) ಮುಖ್ಯ ಕಟ್ಟಡಗಳು | ನಂ. | 3 ಸ್ತ್ರಿ ಶಕ್ತಿ ಮಾರಾಟ ಮಳಿಗೆಗಳು |
| 2) ಸಣ್ಣ ಕಟ್ಟಡಗಳು | ನಂ. | 114 ಅಂಗನವಾಡಿ ಕಟ್ಟಡಗಳು |

**(ಡ) ಕುಡಿಯುವ ನೀರು.**

| | | |
|---|---|---|
| 1) ನೀರು ಸರಬರಾಜು ಯೋಜನೆಗಳು | ನಂ. | 445 |
| 2) ಕಿರು ನೀರು ಸರಬರಾಜು ಯೋಜನೆ | ನಂ. | 691 |
| 3) ಕೈಪಂಪು ಕೊಳವೆ ಬಾವಿಗಳು | ನಂ. | 2785 |

ಕಾರ್ಯನಿರ್ವಾಹಕ ಇಂಜಿನೀಯರ್ ಇವರ ಪಂಚಾಯತ್ ರಾಜ್ ಇಂಜಿನೀಯರಿಂಗ್ ವಿಭಾಗ ಕೊಪ್ಪಳ ಕಛೇರಿಯ ಮುಖ್ಯಸ್ಥರಾಗಿರುತ್ತಾರೆ. ಇವರ ಅಧೀನದಲ್ಲಿ 4 ಶಾಖೆಗಳು ಕಾರ್ಯನಿರ್ವಹಿಸುತ್ತವೆ.

1) ತಾಂತ್ರಿಕ ಶಾಖೆ
2) ಆಡಳಿತ ಶಾಖೆ
3) ಲೆಕ್ಕ ಶಾಖೆ
4) ಉಗ್ರಾಣ ಶಾಖೆ

**1) ತಾಂತ್ರಿಕ ಶಾಖೆ:**

ಕಾರ್ಯನಿರ್ವಾಹಕ ಇಂಜಿನೀಯರವರು ಈ ವಿಭಾಗ ಕಾರ್ಯಾಲಯದ ತಾಂತ್ರಿಕ ವಿಷಯಗಳಿಗೆ ಸಂಬಂಧಪಟ್ಟ ಎಲ್ಲಾ ಕಾರ್ಯಗಳ ಕಾರ್ಯಭಾರವನ್ನು ಹೊಂದಿದ್ದು, ಇವರಿಗೆ ಸಹಾಯಕ್ಕಾಗಿ ಸಹಾಯಕ ಇಂಜಿನೀಯರರು–4, ಖಾಲಿ ಹುದ್ದೆ 04– ಕಿರಿಯ ಇಂಜಿನೀಯರರು– ಡಿ.ಎಂ.2 ಸಿಬ್ಬಂದಿಗಳು ಕಾರ್ಯನಿರ್ವಹಿಸುತ್ತಾರೆ.

1) ಉದ್ದೇಶಿಸಿರುವ ರಸ್ತೆ, ಸೇತುವೆ ಮತ್ತು ಕಟ್ಟಡ ಕಾಮಗಾರಿಗಳ ನಿರ್ಮಾಣ ಹಾಗೂ ನಿರ್ವಹಣೆ ಹಾಗೂ ಪರಿವೀಕ್ಷಣೆ ಹಾಗೂ ತಾಂತ್ರಿಕವಾಗಿ ಪರಿಶೀಲಿಸುವುದು.
2) ಅಂದಾಜು ಪಟ್ಟಿ ಹಾಗೂ ವಿನ್ಯಾಸಗಳನ್ನು ಪರಿಶೀಲಿಸಿ ತಯಾರಿಸಿ ಆಡಳಿತಾತ್ಮಕ ಅನುಮೋದನೆಗಾಗಿ ಹಾಗೂ ತಾಂತ್ರಿಕ ಮಂಜೂರಾತಿಗಾಗಿ ವೃತ್ತ ಕಛೇರಿಗೆ ಸಲ್ಲಿಸುವುದು.
3) ಯೋಜನೆಗಳ ಅನುಷ್ಟಾನದ ಪ್ರಗತಿ ಪತ್ರಿಕೆಗಳನ್ನು ತಯಾರಿಸಿ ಜಿಲ್ಲಾ ಪಂಚಾಯತ್ ಕಛೇರಿಗೆ ಸಲ್ಲಿಸುವುದು.
4) ಎಂ.ಎಂ.ಆರ್.ಮತ್ತು ಕೆ.ಡಿ.ಪಿ ಸಭೆಗಳಿಗೆ ಪ್ರಗತಿ ವರದಿ ತಯಾರಿಸುವುದು ಮತ್ತು ಹಾಜರಾಗುವುದು
5) ಕಾಮಗಾರಿಗಳ ಕಾರ್ಯಕ್ರಮ ಪಟ್ಟಿ ತಯಾರಿಸುವುದು ಹಾಗೂ ಅನುಮೋದನೆ ಪಡೆಯುವುದು
6) ಯೋಜನೆಗಳ ನಿರ್ಮಾಣದ ಪಾವತಿಗಳನ್ನು ಪರಿಶೀಲಿಸಿ ಪಾವತಿ ಮಾಡುವುದು

**ಕೈಪಿಡಿ –2**

**ಸಂಸ್ಥೆಯ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದ ಅಧಿಕಾರ ಮತ್ತು ವಿಧಿಗಳ ವಿವರ.**

ಕಾರ್ಯನಿರ್ವಾಹಕ ಇಂಜಿನೀಯರ್, ಪಂಚಾಯತ್ ರಾಜ್ ಇಂಜಿನೀಯರಿಂಗ್ ವಿಭಾಗ ಕೊಪ್ಪಳ ಇವರ ವಿಭಾಗದ ಮುಖ್ಯಸ್ಥರಿದ್ದು, ಇವರ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಜಿಲ್ಲಾ ಪಂಚಾಯತ್ ಕೊಪ್ಪಳ ಇವರ ಅಧೀನದಲ್ಲಿ ಕೆಲಸ ನಿರ್ವಹಿಸುತ್ತಾರೆ.

**ಕಾರ್ಯನಿರ್ವಾಹಕ ಇಂಜಿನೀಯರವರ ಕಾರ್ಯಭಾರ ಈ ಕೆಳಗಿನಂತಿರುತ್ತದೆ.**

1) ವಿಭಾಗದ ಮುಖ್ಯಸ್ಥರಾಗಿ ಕಾರ್ಯನಿರ್ವಾಹಕ ಇಂಜಿನೀಯರವರು ಇರುತ್ತಾರೆ. ಇವರು ವಿಭಾಗದ ಕಾಮಗಾರಿಗಳ ಶೇ.100 ರಷ್ಟು ಪರಿಶೀಲನೆ ಮಾಡಬೇಕಾಗುತ್ತದೆ.
2) ಮೇಲಾಧಿಕಾರಿಗಳು ನೀಡಿರುವ ತಪಾಸಣೆಯ ಟಿಪ್ಪಣಿಗಳಿಗೆ ತ್ವರಿತವಾಗಿ ಅನುಸರಣಾ ವರದಿಯನ್ನು ನಿಯಮಾವಳಿಗಳಂತೆ ಸಲ್ಲಿಸುವುದು.
3) ವಿಭಾಗದ ಸಿಬ್ಬಂದಿ. ಲೆಕ್ಕ ವಿಚಾರಗಳು ಮತ್ತು ತಾಂತ್ರಿಕ ವಿಚಾರಗಳು, ಉಗ್ರಾಣದ ಲೆಕ್ಕ ವಿಚಾರಗಳು ಈ ಎಲ್ಲವನ್ನು ನಿರ್ವಹಿಸುವಲ್ಲಿ ಅವರೇ ಜವಾಬ್ದಾರರಾಗಿರುತ್ತಾರೆ
4) ವಿಭಾಗದ ಅಧೀನದಲ್ಲಿ ಲೆಕ್ಕ ಪರಿಶೋಧನಾಧಿಕಾರಿಗಳು ಅಧೀಕ್ಷಕರು ಪ್ರಥಮ ದರ್ಜೆ ಸಹಾಯಕರು ದ್ವಿತೀಯ ದರ್ಜೆ ಸಹಾಯಕರು ಪ್ರಥಮ ದರ್ಜೆ ಲೆಕ್ಕಸಹಾಯಕರು ದ್ವಿತೀಯ ದರ್ಜೆ ಲೆಕ್ಕ ಸಹಾಯಕರು. ಸಹಾಯಕ ಇಂಜಿನೀಯರ್/ಕಿರಿಯ ಇಂಜಿನೀಯರ್ ಬೆರಳಚ್ಚುಗಾರರು ವಿಭಾಗದ ಕೆಲಸಗಳನ್ನು ಜವಾಬ್ದಾರಿಯುತರಾಗಿ ಕಾರ್ಯನಿರ್ವಾಹಕ ಇಂಜಿನೀಯರರವರಿಗೆ ಕೆಲಸ ನಿರ್ವಹಿಸಲು ಸಹಾಯಕರಾಗಿರುತ್ತಾರೆ.
5) ಕಾರ್ಯನಿರ್ವಾಹಕ ಇಂಜಿನೀಯರರು ಮೇಲಾಧಿಕಾರಿಗಳಿಗೆ ಮಾಹಿತಿಯನ್ನು ನಿಗದಿತ ದಿನಾಂಕದೊಳಗೆ ಎಲ್ಲಾ ನಿಯತಕಾಲಿಕ ನಿಯಮಾನುಸಾರ ಸಲ್ಲಿಸಲು ಕ್ರಮ ತೆಗೆದುಕೊಳ್ಳುವುದು.
6) ಅಂದಾಜು ಪತ್ರಿಕೆ ಪರಿಶೀಲಿಸಿ ಸಹಾಯಕ ಇಂಜಿನೀಯರ್/ಕಿರಿಯ ಇಂಜಿನೀಯರ್‌ರವರುಗಳು ತಾಂತ್ರಿಕ ವಿಚಾರಗಳು, ಅಂದಾಜು ಪತ್ರಿಕೆ ತಾಂತ್ರಿಕ ಮಂಜೂರಾತಿ ಒಪ್ಪಂದ ಕರಾರು ಪತ್ರಗಳು ಅನುಮೋದಿಸಲ್ಪಟ್ಟ ಸುವರ್ಣಗ್ರಾಮೋದಯ ಸ್ವಚ್ಛಗ್ರಾಮ, ನಬಾರ್ಡ ರಸ್ತೆಗಳ, ಸುವರ್ಣ ಆಣೆ, ಕುಡಿಯುವ ನೀರಿನ ಸರಬರಾಜು

ಯೋಜನೆ, ಅಂತರಜಲ ಅಭಿವೃದ್ದಿ, 5054 ರಸ್ತೆ ಮತ್ತು ಸೇತುವೆ, ಬಯಲು ಸೀಮೆ ಅಭಿವೃದ್ದಿ ಎಂ.ಎಲ್.ಎ. ಗ್ರ್ಯಾಂಟ್, ಎಮ್.ಎಲ್.ಸಿ.ಗ್ರ್ಯಾಂಟ್, 3054 ಮತ್ತು ಸಿ.ಎಮ್.ಜಿ.ಎಸ್.ವೈ, 12ನೇ ಹಣಕಾಸು ರಸ್ತೆಗಳ NREGA ಕಾಮಗಾರಿ ಎಮ್.ಪಿ.ಗ್ರ್ಯಾಂಟ್ ಅತೀವೃಷ್ಟಿ ಕಾಮಗಾರಿ,2702 ಸಣ್ಣ ನೀರಾವರಿ, ರಂಗ ಮಂದಿರ, ಕಾಮಗಾರಿ ಅಂದಾಜು ಪತ್ರಿಕೆಗಳು ಪರಿಶೀಲಿಸುವುದು ಮತ್ತು ತಾಲೂಕ ಪಂಚಾಯತ್ ಕಾಮಗಾರಿಗಳ ಪತ್ರ ವ್ಯವಹಾರ.

**ಕೈಪಿಡಿ–3**

**ನಿರ್ಣಯ ತೆಗೆದುಕೊಳ್ಳುವಲ್ಲಿ ಪಾಲಿಸಬೇಕಾದ ವಿಧಿ ವಿಧಾನಗಳು ಮತ್ತು ಪರಿವೀಕ್ಷಣೆ ಹಾಗೂ ಜವಾಬ್ದಾರಿ ವಿವರಗಳು ಇಲಾಖೆಯು ಕಾಮಗಾರಿಗೆ ಸಂಬಂಧ ಪಟ್ಟ ಕಾರ್ಯನಿರ್ವಹಿಸುವಲ್ಲಿ**

ಲೋಕೋಪಯೋಗಿ ಇಲಾಖೆಯ ಸಂಹಿತೆ ಭಾಗ–1 ಮತ್ತು ಭಾಗ–2 ಕರ್ನಾಟಕ ಪಾರದರ್ಶಕ ನಿಯಮ

ಲೋಕೋಪಯೋಗಿ ಲೆಕ್ಕ ಸಂಹಿತೆ ಭಾಗ–1 ಮತ್ತು ಭಾಗ–2 ನ್ನು ಅನುಸರಿಸಲಾಗುವುದು.

ಭೂ ಸ್ವಾಧೀನ ಕಾಯ್ದೆ 1894 ಹಾಗೂ ತಿದ್ದುಪಡಿ ಕಾಯ್ದೆ 1984

ಉಗ್ರಾಣ ಕೈಪಿಡಿ

ಮಧ್ಯಸ್ಥಿಕೆ ಕಾಯ್ದೆಗಳನ್ನು ಅನುಸರಿಸಲಾಗುತ್ತಿದೆ.

**ಆಡಳಿತವನ್ನು ನಿರ್ವಹಿಸಲು**

ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು

ಕರ್ನಾಟಕ ಆರ್ಥಿಕ ಸಂಹಿತೆ

ಕರ್ನಾಟಕ ಖಜಾನಾ ಸಂಹಿತೆ

ಕರ್ನಾಟಕ ನಾಗರೀಕ ಸೇವಾ (ನಡೆತೆ) ನಿಯಮಗಳು

ಇವುಗಳನ್ನು ಅನುಸರಿಸಲಾಗುತ್ತಿದೆ.

**2. ಆಡಳಿತ ಶಾಖೆ:**

ಕಾರ್ಯನಿರ್ವಾಹಕ ಇಂಜಿನೀಯರ್, ಪಂಚಾಯತ್ ರಾಜ್ ಇಂಜಿನೀಯರಿಂಗ್ ವಿಭಾಗ ಕೊಪ್ಪಳ ಕಛೇರಿಯಲ್ಲಿ ಮಂಜೂರಾದ ಹುದ್ದೆಗಳು ಒಟ್ಟು 37 ಇವುಗಳಲ್ಲಿ ಮಂಜೂರಾದ ಹುದ್ದೆಗಳಲ್ಲಿ 28 ಜನ ಸಿಬ್ಬಂದಿಯವರು ಕಾರ್ಯನಿರ್ವಹಿಸುತ್ತಿದ್ದಾರೆ. ಹಾಗೂ ಹೆಚ್ಚುವರಿ ಸಿಬ್ಬಂದಿಗಳು 6 ಜನ ಕೆಲಸನಿರ್ವಹಿಸುತ್ತಿದ್ದಾರೆ. ಈ ಸಂಖ್ಯೆಗಳ ಪೈಕಿ ಹಾಲಿ ಕಾರ್ಯನಿರ್ವಹಿಸುತ್ತಿರುವ ವರ್ಗ ಎ –1 ವರ್ಗ ಬಿ–5 ವರ್ಗ ಸಿ–18 ಮತ್ತು ವರ್ಗ ಡಿ–4 ಮಂಜೂರಾದ ಹುದ್ದೆಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ. ಮತ್ತು ಸಂಖ್ಯಾರಿಕ್ತ ಹುದ್ದೆ ನಂ. 6 ಜನ ಕಾರ್ಯನಿರ್ವಹಿಸುತ್ತಿದ್ದಾರೆ. ಒಟ್ಟು 34 ಜನ ಅಧಿಕಾರಿ, ಸಿಬ್ಬಂದಿಯವರು ಕೆಲಸನಿರ್ವಹಿಸುತ್ತಿದ್ದಾರೆ.

ಆಡಳಿತ ಶಾಖೆಯಲ್ಲಿ ಅಧೀಕ್ಷಕರು, ಇಬ್ಬರು ಪ್ರಥಮ ದರ್ಜೆ ಸಹಾಯಕ ಹಾಗೂ ಒಬ್ಬ ದ್ವಿತೀಯ ದರ್ಜೆ ಸಹಾಯಕರು ಕಾರ್ಯನಿರ್ವಹಿಸುತ್ತಿದ್ದು.ಇವರಲ್ಲಿ ಅಧೀಕ್ಷಕರು ಆಡಳಿತ ಶಾಖೆ ಹಾಗೂ ನಿರ್ವಹಣೆ ಹಾಗೂ ಮೇಲ್ವಿಚಾರಣೆ ಕಾರ್ಯನಿರ್ವಾಹಣಾ ವರದಿಗಳು ಗುತ್ತಿಗೆದಾರ ರಹಸ್ಯ ವರದಿಗಳು ಇಲಾಖಾ ವಿಚಾರಣೆಗಳು ಆಡಳಿತ ಶಾಖೆಯ ತಪಾಸಣೆಗೆ ಪಲಾನಾ ವರದಿ ತಯಾರಿಸಿ ಕಳುಹಿಸುವದು ಅದೇ ರೀತಿ ಪ್ರಥಮ ದರ್ಜೆ ಸಹಾಯಕ ಇವರು ಆಡಳಿತಕ್ಕೆ ಸಂಬಂಧಪಟ್ಟಂತೆ ಎ ಮತ್ತು ಬಿ ಗ್ರೂಪ್ ನೌಕರರ ಸೇವಾ ವಿವರಗಳು ಕಾರ್ಯನಿರ್ವಾಹಕ ಇಂಜಿನೀಯರವರ ವೇತನ ಬಿಲ್ಲು ಹಾಗೂ ಸೇವಾ ಪುಸ್ತಕಗಳ ನಿರ್ವಹಣೆ ಮುಂತಾದ ಕಾರ್ಯಗಳನ್ನು ಕಾರ್ಯನಿರ್ವಾಹಕ ಇಂಜಿನೀಯರರ ಆದೇಶ ಮೇರೆಗೆ ಕಾರ್ಯನಿರ್ವಹಿಸುತ್ತಾರೆ.

1) ಒಬ್ಬ ದ್ವಿತೀಯ ದರ್ಜೆ ಸಹಾಯಕರು, ಆಡಳಿತ ಶಾಖೆಯು ಆಡಳಿತಕ್ಕೆ ಸಂಬಂಧಪಟ್ಟಂತೆ ಎ ಮತ್ತು ಬಿ ಗ್ರೂಪ್ ನೌಕರರ ಸೇವಾ ವಿವರಗಳ ಹಾಗೂ ಬಡ್ತಿಗಳ ಮತ್ತು ನಿವೃತ್ತಿ, ಪಿಂಚಣಿ, ರಜೆ ವಗೈರೆಗಳಿಗೆ ಸಂಬಂಧಿಸಿದಂತೆ ದಾಖಲೆಗಳನ್ನು ಸಲ್ಲಿಸುವುದು ಮತ್ತು ನಿರ್ವಹಿಸುವುದು.
2) ಸಿಬ್ಬಂದಿ ವರ್ಗದ ವೇತನ ಬಿಲ್ಲುಗಳನ್ನು ಹಾಗೂ ಸಾದಿಲ್ವಾರು ಬಿಲ್ಲುಗಳನ್ನು ಸಿದ್ದಪಡಿಸುವುದು ಮತ್ತು ಸಂಬಂಧಪಟ್ಟಂತೆ ಅನುದಾನ ವಗೈರೆಗಳನ್ನು ಬಿಲ್ಲುಗಳಿಗೆ ಸಕ್ಷಮ ಅಧಿಕಾರಿಯ ಅನುಮೋದನೆ ಪಡೆದ ನಂತರವೇ ನಗದೀಕರಣಕ್ಕೆ ಸಲ್ಲಿಸುವುದು.

3) ನೌಕರರ ವಾರ್ಷಿಕ ವರದಿಗಳಾದ ಆಸ್ತಿ ಮತ್ತು ಹೊಣೆಗಾರಿಕೆ ಪಟ್ಟಿ ಹಾಗೂ ಕಾರ್ಯನಿರ್ವಹಣಾ ವರದಿಗಳನ್ನು ನೌಕರರಿಂದ ಪಡೆದು ಮೇಲಾಧಿಕಾರಿಗಳ ಅವಗಾಹಣೆಗೆ ಸಲ್ಲಿಸುವುದು.

4) ಆಡಳಿತ ಶಾಖೆಯ ಇನ್ನೊಬ್ಬ ದ್ವಿತೀಯ ದರ್ಜೆ ಸಹಾಯಕರು ಸಿ ಮತ್ತು ಡಿ ದರ್ಜೆ ನೌಕರರ (ಕಿ.ಇಂ. ಹೊರತುಪಡಿಸಿ) ಪಿಂಚಣಿ ಉದ್ಯೋಗ ವಿನಿಮಯ ಕೇಂದ್ರದ ನಿಯತಕಾಲಿಕೆ ಸಲ್ಲಿಸುವುದು. ಸಿ ಮತ್ತು ಡಿ ದರ್ಜೆ ನೌಕರರ ಸೇವಾ ಪುಸ್ತಕಗಳ ನಿರ್ವಹಣೆ ದಿನಗೂಲಿ ನೌಕರರ ಪತ್ರ ವ್ಯವಹಾರ, ಭೂಸ್ವಾಧೀನ ಪತ್ರ ವ್ಯವಹಾರ ಮುಂತಾದ ಕೆಲಸಗಳನ್ನು ನಿರ್ವಹಿಸುತ್ತಿದ್ದಾರೆ.

**3) ಲೆಕ್ಕ ಪತ್ರ ಶಾಖೆ:**

ಈ ಶಾಖೆಯಲ್ಲಿ ಒಬ್ಬ ಲೆಕ್ಕ ಪರಿಶೋಧನಾಧಿಕಾರಿ ಮೂರು ಪ್ರಥಮ ದರ್ಜೆ ಲೆಕ್ಕ ಸಹಾಯಕರು ಹಾಗೂ 3 ದ್ವಿತೀಯ ದರ್ಜೆ ಲೆಕ್ಕ ಸಹಾಯಕರು ಕೆಲಸ ನಿರ್ವಹಿಸುತ್ತಿದ್ದಾರೆ. ಲೆಕ್ಕ ಪರಿಶೋಧನಾಧಿಕಾರಿಗಳು. ಲೆಕ್ಕ ಶಾಖೆಯ ಉಸ್ತುವಾರಿ ಹಾಗೂ ಅನುಮೋದನೆ ನೀಡಲಾದ ಕಾಮಗಾರಿಗಳನ್ನು ವರ್ಗೀಕರಿಸಿ ಅವುಗಳಿಗೆ ಅನುದಾನ ಹಂಚಿ ಎಫ್.ಆರ್.ಎ ತಯಾರಿಕೆ ಅನುದಾನ ಮತ್ತು ವೆಚ್ಚ ಮಾಸಿಕ ವಿವರಗಳು ಸರಕಾರಕ್ಕೆ ಸಲ್ಲಿಸುವದು. ಮಹಾಲೇಖಪಾಲಕರು, ಮುಖ್ಯ ಲೆಕ್ಕಾಧಿಕಾರಿಗಳ ತಪಾಸಣಾ ವರದಿಗಳು ಎ.ಜಿ. ಕಂಡಿಕೆಗಳಿಗೆ ಸಂಬಂಧಿಸಿದ ಪತ್ರ ವ್ಯವಹಾರ ಮಾಡುವುದು ಪ್ರಗತಿ ಪತ್ರಗಳನ್ನು ತಯಾರಿಸಿ ಮೇಲಾಧಿಕಾರಿಗಳಿಗೆ ಸಲ್ಲಿಸುವುದು. ಪ್ರಥಮ ದರ್ಜೆ ಲೆಕ್ಕ ಸಹಾಯಕರು ಮತ್ತು ದ್ವಿತೀಯ ದರ್ಜೆ ಲೆಕ್ಕ ಸಹಾಯಕರು ಇವರು ತಮಗೆ ವಹಿಸಿದ ತಾಲೂಕವಾರ ಉಪವಿಭಾಗಗಳ ಕಾಮಗಾರಿ ಬಿಲ್ಲುಗಳು ಪರಿಶೀಲನೆಯೊಂದಿಗೆ ವಿಭಾಗಿ ಲೆಕ್ಕಪತ್ರ ತಯಾರು ಮಾಡುವದು.

**4) ಉಗ್ರಾಣ ಶಾಖೆ:**

ಈ ಶಾಖೆಯಲ್ಲಿ ಯಾವುದೇ ನಿಗಿದ ಉಗ್ರಾಣ ಸಹಾಯಕರ ಮಂಜೂರು ಹುದ್ದೆ ಇಲ್ಲದ ಕಾರಣ ಗಂಗಾವತಿ ಪಂಚಾಯತ್ ರಾಜ್ ಉಪವಿಭಾಗದಿಂದ ಒಬ್ಬ ದ್ವಿತೀಯ ದರ್ಜೆ ಸಹಾಯಕ ಇವರನ್ನು ನಿಯೋಜನೆ ಮೇಲೆ ತೆಗೆದು ಕೊಳ್ಳಲಾಗಿದೆ. ಸದರಿ ಸಿಬ್ಬಂದಿಯವರು ದಾಸ್ತಾನು ಸಾಮಗ್ರಿಗಳ ಹಾಗೂ ಯಂತ್ರೋಪಕರಣ ಸಾಮಗ್ರಿಗಳು ಹಾಗೂ ಸ್ಥಿರ ಸಾಮಗ್ರಿಗಳ ಪತ್ರ ವ್ಯವಹಾರ, ನಿರುಪಯುಕ್ತ ಸಾಮಗ್ರಿಗಳ ಬಗ್ಗೆ ಸರ್ವೆ ವರದಿಯನ್ನು ಸಲ್ಲಿಸುವದು, ಉಗ್ರಾಣಕ್ಕೆ ಸಂಬಂಧ ಪಟ್ಟ ಲೆಕ್ಕ ಪತ್ರ ಮಾಹಿತಿಯನ್ನು ಮೇಲಾಧಿಕಾರಿಗಳಿಗೆ ಸಲ್ಲಿಸುವದು.

ಈ ಇಲಾಖೆಯಲ್ಲಿ ನಿರ್ವಹಿಸಲ್ಪಡುವ ಎಲ್ಲ ಕಾಮಗಾರಿಗಳನ್ನು ಕರ್ನಾಟಕ ಪಾರದರ್ಶಕ ನಿಯಮದ ಅನುಸಾರ ಟೆಂಡರ್ ಕರೆದು ಗುತ್ತಿಗೆದಾರರಿಗೆ ನೀಡಲಾಗುತ್ತಿದೆ. ಗುತ್ತಿಗೆದಾರರನ್ನು ನಿಗದಿಪಡಿಸಿದ ನಂತರ ಅವರಿಗೆ ಕಾರ್ಯಾದೇಶ ಆಗಿಂದ್ದಾಗ್ಗೆ ಕಾಮಗಾರಿಗಳಿಗೆ ಭೇಟಿ ನೀಡಿ ಕೆಲಸವನ್ನು ಪರಿವೀಕ್ಷಿಸುತ್ತಾರೆ. ಅಧೀಕ್ಷಕ ಇಂಜಿನೀಯರರು, ಮುಖ್ಯ ಇಂಜಿನೀಯರರು ಕಾಮಗಾರಿಗಳಿಗೆ ಬೇಟಿ ನೀಡಿ ಸಲಹೆ ಸೂಚನೆಗಳನ್ನು ನೀಡುತ್ತಾರೆ. ಪ್ರಗತಿಯನ್ನು ಪರಿಶೀಲಿಸಲು ಅಧೀಕ್ಷಕ ಇಂಜಿನೀಯರರು ಮತ್ತು ಮುಖ್ಯ ಇಂಜಿನೀಯರರ ಕಾಮಗಾರಿಗಳಿಗೆ ಬೇಟಿ ನೀಡಿ ಮಟ್ಟದಲ್ಲಿ ಸಭೆ ನಡೆಸಲಾಗುತ್ತದೆ.

ಅಕೌಂಟ್ ಟೆಬಿಲಿಟಿ ಬಗ್ಗೆ ಮಹಾಲೇಖಾಪಾಲಕರು ವರ್ಷಕ್ಕೊಮ್ಮೆ ಸಂಬಂಧಿತ ವಿಭಾಗ ಕಛೇರಿಗಳ ಪರಿವೀಕ್ಷಣೆ ಮಾಡುತ್ತಾರೆ. ಅಲ್ಲದೇ ಮುಖ್ಯ ಇಂಜಿನೀಯರವರ ಕಛೇರಿ, ಅಧೀಕ್ಷಕ ಇಂಜಿನೀಯರವರ ಕಛೇರಿಯಿಂದಲೂ ವಿಭಾಗಗಳ ತಪಾಸಣೆ ನಡೆಯುತ್ತದೆ. ಕಳಪೆ ಕಾಮಗಾರಿಯ ಬಗ್ಗೆ ಏನಾದರೂ ಅರ್ಜಿ ಬಂದಲ್ಲಿ ಮಾನ್ಯ ಲೋಕಾಯುಕ್ತರು ಕೂಡ ಕಾಮಗಾರಿಗಳ ಪರಿಶೀಲನೆ ಮಾಡಿ ಏನಾದರೂ ಕಳಪೆ ಕಾಮಗಾರಿ ಇದ್ದಲ್ಲಿ ಸೂಕ್ತ ಕ್ರಮಕ್ಕೆ ಶಿಫಾರಸ್ಸು ಮಾಡುತ್ತಾರೆ.

**ಕೈಪಿಡಿ:– 4**

ಕರ್ತವ್ಯ ನಿರ್ವಹಣೆಯಲ್ಲಿ ಪಾಲಿಸಬೇಕಾದ ಸೂತ್ರಗಳು

ಲೋಕೋಪಯೋಗಿ ಇಲಾಖೆ ಮತ್ತು ನೀರಾವರಿ ಇಲಾಖೆಯ ಅಧಿಕಾರಿಗಳ ಆರ್ಥಿಕ ಅಧಿಕಾರ ಪ್ರತ್ಯಾಯೋಜನೆ

ಸರ್ಕಾರಿ ಆದೇಶ ಸಂಖ್ಯೆ:–ಪಿಡಬ್ಲ್ಯೂ–1/ಎಪ್ಸಿಆರ್ 93/ಬೆಂಗಳೂರು ದಿನಾಂಕ:15–12–1994

ಸಾಮಾನ್ಯ ಆರ್ಥಿಕ ಅಧಿಕಾರ ಪ್ರತ್ಯಾಯೋಜನೆ

ಸರ್ಕಾರಿ ಆದೇಶ ಸಂಖ್ಯೆ:–ಎಫ್ ಡಿ–1/ಟಿಎಪ್ಪಿ 2001 ಬೆಂಗಳೂರು ದಿನಾಂಕ:02–02–2001

ಲೋಕೋಪಯೋಗಿ ಇಲಾಖೆ ಸಂಹಿತೆ

ಲೋಕೋಪಯೋಗಿ ಇಲಾಖೆ ಆರ್ಥಿಕ ಸಂಹಿತೆ.

**ಕೈಪಿಡಿ:–5**

ಇಲಾಖೆಯ ಅಧೀನದಲ್ಲಿರುವ ಮತ್ತು ಸಿಬ್ಬಂದಿ ಉಪಯೋಗಿಸುತ್ತಿರುವ ನಿಯಮಗಳು, ವಿನಿಮಯಗಳು, ಸೂಚನೆಗಳು, ದಾಖಲೆಗಳು ಕೈಪಿಡಿಗಳ ವಿವರ.

**ಕಛೇರಿ ಕೈಪಿಡಿ ನಿಯಮಗಳು, ವಿನಿಮಯಗಳು ಮತ್ತು ಸೂಚನೆಗಳು**

ಕರ್ನಾಟಕ ನಾಗರೀಕ ಸೇವಾನಿಯಮಗಳು

ಕರ್ನಾಟಕ ಸರ್ಕಾರಿ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು ನಿಯಮಗಳು)

ಕರ್ನಾಟಕ ಆರ್ಥಿಕ ಸಂಹಿತೆ

ಲೋಕೋಪಯೋಗಿ ಇಲಾಖೆಯ ಸಂಹಿತೆ ಭಾಗ –1 ಮತ್ತು ಭಾಗ –2

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಆಧ್ಯಾದೇಶ 2000

ಲೋಕೋಪಯೋಗಿ ಲೆಕ್ಕ ಸಂಹಿತೆ ಭಾಗ –1 ಮತ್ತು ಭಾಗ –2 ನ್ನು ಅನುಸರಿಸಲಾಗುವುದು

ಭೂಸ್ವಾಧೀನ ಕಾಯ್ದೆ

ಉಗ್ರಾಣ ಕೈಪಿಡಿ

ಮಧ್ಯಸ್ಥಿಕೆ ಕಾಯ್ದೆ 1996

ಕರ್ನಾಟಕ ನೀರಾವರಿ ಕಾಯ್ದೆ 1965

ಸಾದಿಲ್ವಾರು ವೆಚ್ಚದ ಕೈಪಿಡಿ

ಕರ್ನಾಟಕ ಖಜಾನೆ ಸಂಹಿತೆ

ಚಾಲ್ತಿ ದರಪಟ್ಟಿ

ಬಜೆಟ್ ಕೈಪಿಡಿ

**ಕೈಪಿಡಿ:–6**

**ಇಲಾಖೆಯ ಅಧೀನದಲ್ಲಿರುವ ವರ್ಗೀಕರಣದ ತ:ಖ್ತೆ.**

**ತಾಂತ್ರಿಕ ಶಾಖೆ:**

1) ಅಧೀಕ್ಷಕ ಇಂಜಿನೀಯರವರ ಮತ್ತು ಮುಖ್ಯ ಇಂಜಿನೀಯರವರ ಮಟ್ಟದಲ್ಲಿ ಮಂಜೂರಾದ ಅಂದಾಜು ಪತ್ರಿಕೆಗಳು ಮತ್ತು ಅದಕ್ಕೆ ಸಂಬಂಧಪಟ್ಟ ಕಡತಗಳು.
2) ಪ್ರಗತಿಯ ವರದಿಗಳು.
3) ಆಯವ್ಯಯಕ್ಕೆ ಸಂಬಂಧಪಟ್ಟ ಆಯವ್ಯಯ ಪ್ರಸ್ತಾವನೆ ಮತ್ತು ಆಯವ್ಯಯ ಪಟ್ಟಿ
4) ಭಾರಿ ಹಾಗೂ ಸಣ್ಣ ಅಂದಾಜುಗಳ ಮಂಜೂರಾತಿ ವಹಿ
5) ಪಿ.ಆರ್.ಇ.ಡಿ.ವಶದಲ್ಲಿರುವ ಸೇತುವೆ ಮತ್ತು ಕಲ್ವರ್ಟಗಳ ವಹಿ
6) ದರ ಸೂಚಿಕ
7) ಆಯವ್ಯಯ ಕಾಮಗಾರಿಗಳ ವಹಿ
8) ಮೇಲಾಧಿಕಾರಿಗಳಿಂದ ಮಂಜೂರಾದ ಅಂದಾಜುಗಳ ಪಟ್ಟಿ

**ಪಿ.ಬಿ.ಯಲ್ಲಿರುವ ರಿಜಿಸ್ಟರ್ ಮಾಹಿತಿ**

1) ತುಂಡು ಗುತ್ತಿಗೆ ಪತ್ರ ಅನುಮೋದನೆ ರಿಜಿಸ್ಟರ್
2) ಸೇತುವೆ ರಿಜಿಸ್ಟರ್
3) ಕಟ್ಟಡಗಳ ರಿಜಿಸ್ಟರ್
4) ಮೇಲಾಧಿಕಾರಿಗಳಿಂದ ಮಂಜೂರಾದ ಅಂದಾಜು ಪತ್ರಿಕೆಗಳ ರಿಜಿಸ್ಟರ್

**ದಾಖಲೆಗಳು:ಆಡಳಿತ ಶಾಖೆ**

ವಿಭಾಗ ಕಛೇರಿಯ ತಪಾಸಣೆಗೆ ಅಗತ್ಯವಿರುವ ವಹಿಗಳು ಮತ್ತು ದಾಖಲೆಗಳ ಪಟ್ಟಿ

1) ಹಾಜರಾತಿ ವಹಿ
2) ಪತ್ರಾಂಕಿತವಲ್ಲದ ಅಧಿಕಾರಿಗಳ ಸಾಂದರ್ಭಿಕ ರಜೆ & ಸಾಂದರ್ಭಿಕ ರಜೆ ಕಡತ ಅರ್ಜಿಗಳೊಂದಿಗೆ

3) ಸಂಘಟನಾ ಚಾರ್ಟ
4) ಮಂಜೂರಾದ ಕಾರ್ಯನಿರ್ವಹಿಸುತ್ತಿರುವ ಮತ್ತು ಖಾಲಿ ಹುದ್ದೆಗಳ ತ:ಖ್ತೆ
5) ಕೆಲಸ ವಿತರಣಾ ತ:ಖ್ತೆ
6) ವೇತನ ಬಡ್ತಿಯ ನಿಗಾ ವಹಿ
7) ವೇತನ ಬಡ್ತಿಯ ಮಂಜೂರಾತಿ ವಹಿ
8) ರಹಸ್ಯ ವರದಿ
9) ಆಸ್ತಿ ಮತ್ತು ಋಣ ತಖ್ತೆ ವಹಿ
10) ಮಹಾಲೇಖಾಪಾಲಕರು ಮತ್ತು ಇತರರಿಗೆ ಕಳುಹಿಸಲಾದ ನಿವೃತ್ತಿ ವೇತನ ಪತ್ರಗಳ ನಿಗಾವಹಿ
11) ಸೇವಾ ವಹಿ
12) ಇಲಾಖಾ ಪರೀಕ್ಷೆಗಳ ನಿಗಾವಹಿ
13) ಪರಿವೀಕ್ಷಣಾ ಟಿಪ್ಪಣಿ ಪುಸ್ತಕ
14) ವೈಯಕ್ತಿಕ ವಹಿ
15) ಪ್ರತಿ ಮಾಹೆಗಳ ಬಾಕಿ ಪಟ್ಟಿ
16) ಸ್ಟಾಂಪು ವಹಿ ಪರಿವೀಕ್ಷಣಾ ದಿನದಂದು ಬಾಕಿ ಇರುವ ಸ್ಟಾಂಪುಗಳ ಮತ್ತು ಸ್ಟಾಂಪುಗಳ ಬೆಲೆಯನ್ನು ತೋರಿಸುವ ತ:ಖ್ತೆ
17) ಸಾಮಾನ್ಯ ಸ್ವೀಕೃತಿ ವಹಿ
18) ರವಾನೆ ವಹಿ
19) ಸ್ಥಳೀಯ ವಿತರಣಾ ರವಾನೆ
20) ಕಛೇರಿ ಆದೇಶ ಪುಸ್ತಕ
21) ವೇತನ ಬಟವಾಡೆ ವಹಿ
22) ಪ್ರಯಾಣ ಭತ್ಯೆ ಬಟವಾಡೆ ವಹಿ

**ಲೆಕ್ಕಪತ್ರ ಶಾಖೆ:**

1) ನಗದು ಪುಸ್ತಕ
2) ಚೆಕ್ ಮೆಮೋ ಪುಸ್ತಕ
3) ಎಲ್.ಓ.ಸಿ.ರಿಜಿಸ್ಟರ್
4) ರೆಮಿಟೆನ್ಸ್ ರಿಜಿಸ್ಟರ್
5) ಚೆಕ್ ರಿಸೀವ್ಡ್ ರಿಜಿಸ್ಟರ್
6) ಡಿ.ಬಿ.ಆರ್.ರಿಜಿಸ್ಟರ
7) ಎಂ.ಪಿ.ಡಬ್ಲ್ಯು.ರಿಜಿಸ್ಟರ್
8) ಟಿ.ಇ.ಓ.ರಿಜಿಸ್ಟರ್
9) ವರ್ಕ್ಸ್ ರಿಜಿಸ್ಟರ್
10) ನಮೂನೆ –81
11) ಅಳತೆ ಪುಸ್ತಕಗಳ ಅರ್ಧವಾರ್ಷಿಕ ನಿಯತಕಾಲಿಕೆ
12) ಅನುದಾನ ಖರ್ಚು ವೆಚ್ಚಗಳ ವಹಿ
13) ಡಿ.ಸಿ.ಬಿಲ್ಲುವಹಿ

**ಉಗ್ರಾಣ ಶಾಖೆ:**

1) ದಾಸ್ತಾನು ಸ್ವೀಕೃತಿ ವಹಿ (ಪಿಡಬ್ಲ್ಯುಎ–4)
2) ದಾಸ್ತಾನು ವಿತರಣಾ ವಹಿ (ಪಿಡಬ್ಲ್ಯುಎ–4)
3) ದಾಸ್ತಾನು ಖರೀದಿ ಪುಸ್ತಕ

4) ಅರ್ಧ ವಾರ್ಷಿಕ ನಿಯತಕಾಲಿಕ ವಹಿ (ಪಿಡಬ್ಲ್ಯುಎ–15)
5) ಖಾಲಿ ಅಳತೆ ಪುಸ್ತಕಗಳ ವಹಿ (ಪಿಡಬ್ಲು ಜಿ–28)
6) ಲೇಖನ ಸಾಮಗ್ರಿಗಳ ಸ್ವೀಕೃತಿ ಮತ್ತು ವಿತರಣಾ ವಹಿ
7) ಕಛೇರಿ ಪೀಠೋಪಕರಣಗಳ ವಹಿ (ಕೆಎಫ್ ಸಿ–34ಎ)
8) ಉಪಕರಣ ಮತ್ತು ಸ್ಥಿರಯಂತ್ರಗಳ ಸ್ವೀಕೃತಿ ವಹಿ (ಪಿಡಬ್ಲ್ಯುಎ–4)
9) ಉಪಕರಣ ಮತ್ತು ಸ್ಥಿರಯಂತ್ರಗಳ ವಿತರಣಾ ವಹಿ (ಪಿಡಬ್ಲ್ಯುಎ–4)
10) ಸೆಪ್ಟಂಬರ್ ಅಂತ್ಯದ ಉಪಕರಣ ಮತ್ತು ಸ್ಥಿರಯಂತ್ರಗಳ ವಾರ್ಷಿಕ ನಿಯತಕಾಲಿಕೆ (ಪಿಡಬ್ಲ್ಯುಜಿ–17)
11) ಅಳತೆ ಪುಸ್ತಕಗಳ ಅರ್ಧವಾರ್ಷಿಕ ನಿಯತಕಾಲಿಕ (ಪಿಡಬ್ಲ್ಯೂಜಿ–17)ಬಿಡುಗಡೆಯಾದ ಸಾಮಗ್ರಿಗಳ ಲೆಕ್ಕದ ವಹಿ

**ಕೈಪಿಡಿ:–7**

ಇಲಾಖೆಯಲ್ಲಿ ನೀತಿ ನಿಯಮಗಳನ್ನು ಅಥವಾ ಆಡಳಿತವನ್ನು ನಡೆಸುವಲ್ಲಿ ಪಡೆಯುವ ಸಲಹಾ ಸೂತ್ರಗಳ ಅಥವಾ ಸಾರ್ವಜನಿಕ ಸದಸ್ಯರುಗಳಿಂದ ಸಲಹೆ ಪಡೆಯುವ ಬಗ್ಗೆ ಇರುವ ವ್ಯವಸ್ಥೆ ಮತ್ತು ವಿವರ

––––––––––––ಏನೂ ಇರುವುದಿಲ್ಲ––––––––––––

**ಕೈಪಿಡಿ:–8**

ಇಲಾಖೆಯಲ್ಲಿ ನಿಗಮ/ಪರಿಷತ್/ಸಮಿತಿ ಮತ್ತು ಇತರೆ ಸಂಸ್ಥೆಗಳ ವಿವರ ಮತ್ತು ಅದರ ಉದ್ದೇಶ ಮತ್ತು ಈ ಸಂಸ್ಥೆಗಳ ಸಭೆಗಳು ಮತ್ತು ಸಭೆಯ ನಡವಳಿಗಳು ಸಾರ್ವಜನಿಕರಿಗೆ ಲಭ್ಯವಿರುವ ಬಗ್ಗೆ.

––––––––––––ಏನೂ ಇರುವುದಿಲ್ಲ––––––––––––

**ಕೈಪಿಡಿ:–9**

ಇಲಾಖೆ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದ ನಿರ್ದೇಶಿಕೆ

ಈ ಇಲಾಖೆಯಲ್ಲಿ ಕಾರ್ಯನಿರ್ವಾಹಕ ಇಂಜಿನೀಯರ್ ಹಾಗೂ ಸಹಾಯಕ ಇಂಜಿನೀಯರ, ಕಿರಿಯ ಇಂಜಿನೀಯರ್ ಇವರ ಅಧಿಕಾರದ ಬಗ್ಗೆ ಕೈಪಿಡಿ–2 ರಲ್ಲಿ ಈಗಾಗಲೇ ತಿಳಿಸಲಾಗಿದೆ.

**ಸಿಬ್ಬಂದಿ ವರ್ಗದ ನಿರ್ದೇಶಿಕೆ (ಸಂಘಟನಾ ನಕ್ಷೆ) ಈ ಕೆಳಗಿನಂತಿದೆ**

| ಕ್ರ. ಸಂ. | ಹುದ್ದೆ | ಹೆಸರು |
|---|---|---|
| 1 | ಕಾರ್ಯನಿರ್ವಾಹಕ ಇಂಜಿನೀಯರ್–1 | ಶ್ರೀ ಎಸ್.ಕೆ.ಪಾಟೀಲ್ |
| 2 | ಸಹಾಯಕ ಇಂಜಿನೀಯರ್–4 | 1. ಶ್ರೀ ಪಿ.ಬಿ.ಎಂ.ಮಹೇಶ ಶಾಸ್ತ್ರೀ<br>2. ಶ್ರೀ ಎಂ.ಸುರೇಂದ್ರನಾಥ<br>3. ಶ್ರೀ ಎಸ್.ಐ ಹಾಸ್ಮಿ<br>4. ಖಾಲಿ |
| 3 | ಕಿರಿಯ ಇಂಜಿನೀಯರ್–4 | 1. ಸಾಹೇಬ್‌ಲಾಲ್ ನದಾಫ್<br>2. ಶ್ರೀಮತಿ ವಿ.ಅರುಣಾ<br>3. ಶ್ರೀ ಭಾಸ್ಕರ್‌ರಾವ್<br>4. ಶ್ರೀ ಚಂದ್ರಶೇಖರ ಬಿಂಜವಾಡಗಿ |
| 4. | ಆಕೃತಿ ರಚನಾಕಾರರು – 2 | 1. ಶ್ರೀ.ವೈ.ಕೆ.ಅಡವಿ<br>2. ಶ್ರೀ.ಬಸವರಾಜ ಐ. |
| 5. | ಅಧೀಕ್ಷಕರು | 1. ಶ್ರೀಮತಿ ಎಂ.ಕೆ.ಧಫೇದಾರ |
| 6 | ಪ್ರಥಮ ದರ್ಜೆ ಸಹಾಯಕರು–1 | ಶ್ರೀ ಮರಿಯಪ್ಪ ದೇವಪ್ಪ ಹರ್ತಿ |

| ಕ್ರ. ಸಂ. | ಹುದ್ದೆ | ಹೆಸರು |
|---|---|---|
| 7 | ದ್ವಿತೀಯ ದರ್ಜೆ ಸಹಾಯಕರು–2 | 1. ಶ್ರೀ ಎಸ್.ಎಸ್.ಪಾಷಾ<br>2. ಶ್ರೀ ರಮೇಶ ವಾಡಪ್ಪಿ |
| 8. | ಲೆಕ್ಕ ಪರಿಶೋಧನಾಧಿಕಾರಿ | 1. ಶ್ರೀ. ಎಲ್.ಎಲ್.ಬಡಿಗೇರ್ |
| 9. | ಪ್ರ.ದ.ಲೆ.ಸ – 3 | 1. ಎ.ಹೇಮಂತಪ್ಪ |
| | | 2. ರಾಮಚಂದ್ರಪ್ಪ |
| | | 3. ಗೋವಿಂದರಾಯ |
| 10. | ದ್ವಿ.ದ.ಲೆ.ಸ – 3 | 1. ಕೆ.ರಾಜು |
| | | 2. ಭೋಗೇಶ |
| | | 3. ಶ್ರೀಮತಿ. ಗೀತಾರಾಣಿ |
| 11 | ವಾಹನ ಚಾಲಕರು–1 (ನಿರ್ವಹಣಾ ಸಿಬ್ಬಂದಿ) | ಶ್ರೀ ಜಾಫರ ಷರೀಫ |
| 12 | ಜವಾನರು–4 | 1. ಶ್ರೀ ಪಂಪಾಪತಿ<br>2. ಶ್ರೀ ಅಡವಿರಾವ್<br>3. ಶ್ರೀ ಶಂಕರ್ ಮ್ಯಾಗೇರಿ<br>4. ಶ್ರೀ ರುದ್ರಪ್ಪ |
| | ಸಂಖ್ಯಾರಿಕ್ತ ಸಿಬ್ಬಂದಿಗಳು | |
| 1) | ಪ್ರ.ದ.ಸ. – 5 (ಸಂಖ್ಯಾರಿಕ್ತ) | 1. ಎಂ.ಎಸ್.ಮುಲ್ಲಾ |
| | | 2. ಶ್ರೀಮತಿ ಚೆನ್ನಮ್ಮಾ |
| | | 3. ಕೆ. ವಿಶ್ವನಾಥ |
| | | 4. ಕೆ.ಸಿ.ಶಾಸ್ತ್ರಿ |
| | | 5. ಚಿದಂಬರ್ ಭಟ್ |
| 2) | ಅಕ್ಷರಸ್ಥ ಸಹಾಯಕ – 1 | 1. ಶಿವಾನಂದಪ್ಪ ಗಾಳಿ |

**ಕೈಪಿಡಿ : 10**) ಇಲಾಖೆಯ ಅಧಿಕಾರ ಮತ್ತು ಸಿಬ್ಬಂದಿ ವರ್ಗದವರ ತಿಂಗಳ / ಪ್ರತಿಫಲ ಮತ್ತು ಅದನ್ನು ನೀಡುವ ಸೂತ್ರಗಳು

ಕಾರ್ಯನಿರ್ವಾಹಕ ಇಂಜಿನೀಯರರ ಕಚೇರಿಯಲ್ಲಿರುವ ಅಧಿಕಾರಿ ಮತ್ತು ಸಿಬ್ಬಂದಿಗಳ ವೇತನವನ್ನು ಕರ್ನಾಟಕ ಸರ್ಕಾರದ ಸಂಚಿತ ನಿಧಿಯಿಂದ ಪಾವತಿಸಲಾಗುತ್ತಿದೆ.

| ಕ್ರ. ಸಂ. | ಹುದ್ದೆ | ಹೆಸರು | ವೇತನ ಶ್ರೇಣಿ | ಮೂಲ ವೇತನ |
|---|---|---|---|---|
| 1 | ಕಾ.ನಿ.ಇಂ–1 | ಎಸ್.ಕೆ.ಪಾಟೀಲ್ | 14050–25050 | 25050 + 1800 PP |
| 2 | ಸ.ಇಂ–4 | 1. ಶ್ರೀ.ಪಿ.ಬಿ.ಎಂ.ಮಹೇಶಶಾಸ್ತ್ರಿ<br>2. ಶ್ರೀ.ಎಂ. ಸುರೇಂದ್ರನಾಥ | 11400–21600 | 14400 – 15200 |
| | | 3. ಶ್ರೀ.ಎಸ್.ಐ.ಹಾಸ್ಮಿ (ಸ.ಇಂ. ಹುದ್ದೆಗೆ ಎಣಿಕೆಯಾಗುತ್ತಿದ್ದಾರೆ) | 8825 – 16000 | 11700 |
| | | 4. ಖಾಲಿ | | |

| ಕ್ರ. ಸಂ. | ಹುದ್ದೆ | ಹೆಸರು | ವೇತನ ಶ್ರೇಣಿ | ಮೂಲ ವೇತನ |
|---|---|---|---|---|
| 3 | ಕಿ.ಇಂ –4 | 1. ಸಾಹೇಬ್ ಲಾಲ್ ನದಾಫ್ | 11400 – 21600 | 15200 |
| | | 2. ಶ್ರೀಮತಿ ವಿ. ಅರುಣಾ | 8825 – 16000 | 9750 |
| | | 3. ಶ್ರೀ.ಬಾಸ್ಕರ್ ರಾವ್ | | 9750 |
| | | 4. ಶ್ರೀ.ಚಂದ್ರಶೇಖರ ಬಿಂಜವಾಡಗಿ | | 9275 |
| 4 | ಆಕೃತಿ ರಚನಾಕಾರ – 2 | 1. ಶ್ರೀ.ವೈ.ಕೆ.ಅಡವಿ | 7275 – 13350 | 16800 |
| | | 2. ಬಸವರಾಜ ಐ | 7275 – 13350 | 10000 |
| 5 | ಅಧೀಕ್ಷಕರು | 1. ಶ್ರೀಮತಿ ಎಂ.ಕೆ.ದಫೇದಾರ | 10000 – 18150 | 16000 |
| 6 | ಪ್ರ.ದ.ಸ – 1 | 1.ಶ್ರೀ.ಮರಿಯಪ್ಪ ದೇವಪ್ಪ ಹರ್ತಿ | 7275 – 13350 | 11400 |
| 7 | ದ್ವಿ.ದ.ಸ. – 2 | 1. ಶ್ರೀ.ಎಸ್.ಎಸ್.ಪಾಷಾ | 5800 – 10500 | 9500 |
| | | 2. ಶ್ರೀ.ರಮೇಶ ವಾಡಪ್ಪಿ | 5800 – 10500 | 9275 |
| 8. | ಶೀಘ್ರಲಿಪಿಗಾರ–1 | – ಖಾಲಿ – | 7275 – 13350 | .. |
| 9. | ಬೆ.ಗಾ – 2 | 1. ಎಸ್.ಟಿ.ಹಂಚಿನಾಳ | 5800 – 10500 | 7800 |
| | | 2. ಖಾಲಿ | 5800 – 10500 | .. |
| 10 | ಸಂಖ್ಯಾ ನಿರೀಕ್ಷಕ – 1 | 1. ಖಾಲಿ | 7275 – 13350 | .. |
| 11. | ಲೆ.ಪ.ಅ. – 1 | 1. ಎಲ್.ಎಲ್.ಬಡಿಗೇರ್ | 11400 – 21600 | 14050 |
| 12. | ಪ್ರ.ದ.ಲೆ.ಸ – 3 | 1. ಎ.ಹೇಮಂತಪ್ಪ | 7275 – 13300 | 9275 |
| | | 2. ರಾಮಚಂದ್ರಪ್ಪ | 7275 – 13300 | 10000 |
| | | 3. ಗೋವಿಂದರಾಯ | 7275 – 13300 | 10500 |
| 13. | ದ್ವಿ.ದ.ಲೆ.ಸ – 3 | 1. ಕೆ.ರಾಜು | 5800 – 10500 | 5900 |
| | | 2. ಭೋಗೇಶ | 5800 – 10500 | 8600 |
| | | 3. ಶ್ರೀಮತಿ. ಗೀತಾರಾಣಿ | 5800 – 10500 | 8600 |
| 14 | ವಾಹನಚಾಲಕ | 1. ಶ್ರೀ.ಜಾಫರ್ ಷರೀಫ್ | 5800 – 10500 | 9750 |
| 15 | ಜವಾನರು – 4 | 1. ಶ್ರೀ ಪಂಪಾಪತಿ<br>2. ಶ್ರೀ ಅಡವಿರಾವ್<br>3. ಶ್ರೀ ಶಂಕರ್ ಮ್ಯಾಗೇರಿ<br>4. ಶ್ರೀ ರುದ್ರಪ್ಪ | 4800 7275 | 6125<br>7100<br>6000<br>6650 |
| 8 | ಸಂಖ್ಯಾತಿರಿಕ್ತ ಸಿಬ್ಬಂದಿಗಳು | | | |

| ಕ್ರ. ಸಂ. | ಹುದ್ದೆ | ಹೆಸರು | ವೇತನ ಶ್ರೇಣಿ | ಮೂಲ ವೇತನ |
|---|---|---|---|---|
| 1) | ಪ್ರ,ದ,ಸ – 5 (ಸಂಖ್ಯಾತಿ ರಿಕ್ತ) | 1. ಎಂ.ಎಸ್.ಮುಲ್ಲಾ | 7572 – 13350 | 11400 |
| | | 2. ಶ್ರೀಮತಿ ಚೆನ್ನಮ್ಮಾ | | 11400 |
| | | 3. ಕೆ. ವಿಶ್ವನಾಥ | | 11100 |
| | | 4. ಕೆ.ಸಿ.ಶಾಸ್ತ್ರಿ | | 11100 |
| | | 5. ಚಿದಂಬರ್ ಭಟ್ | | 11100 |
| 2) | ಅಕ್ಷರಸ್ಥ ಸಹಾಯಕ – 1 | 1. ಶಿವಾನಂದಪ್ಪ ಗಾಳಿ | 5800– 10500 | 7800 |

**ಕೈಪಿಡಿ : 11)** ಇಲಾಖೆಯಲ್ಲಿ ಸಹಾಯಧನ ನೀಡುವ ಕಾರ್ಯಕ್ರಮಗಳ ನಿರ್ವಹಣಾ ವಿವರ ಮತ್ತು ಅದಕ್ಕೆ ಒದಗಿಸಲಾದ ಅನುದಾನ ಮತ್ತು ಫಲಾನುಭವಿಗಳ ವಿವರಗಳು.

ಸಹಾಯಧನ ನೀಡುವ ಕಾರ್ಯಕ್ರಮಗಳು ಇರುವುದಿಲ್ಲ.

**ಕೈಪಿಡಿ: 12)** ಇಲಾಖೆಯಲ್ಲಿ ನೀಡುತ್ತಿರುವ ಪರ್ಮಿಟ್ ಅಥವಾ ಅಧಿಕಾರ ಪತ್ರಗಳ ವಿವರ ಮತ್ತು ರಿಯಾಯಿತಿ ಪಡೆಯುವವರ ವಿವರ.

ಕಾರ್ಯನಿರ್ವಾಹಕ ಇಂಜಿನೀಯರ್, ಪಂ.ರಾ.ಇಂ. ವಿಭಾಗ, ಕೊಪ್ಪಳ ವಿಭಾಗದ ವ್ಯಾಪ್ತಿಯಲ್ಲಿ ಯಾವುದೇ ಪರ್ಮಿಟ್, ಅಥವಾ ಅಧಿಕಾರ ಪತ್ರಗಳನ್ನು ನೀಡುತ್ತಿಲ್ಲ.

**ಕೈಪಿಡಿ :– 13)** ಇಲಾಖೆಯಲ್ಲಿ ಮಾಹಿತಿಯನ್ನು ವೆಬ್‌ಸೈಟ್ ನಲ್ಲಿ ನೀಡಿರುವ ಬಗ್ಗೆ ವಿವರ ಇಲಾಖೆಯಲ್ಲಿ ವೆಬ್‌ಸೈಟ್ ಯಾವುದೂ ಇರುವುದಿಲ್ಲ.

**ಕೈಪಿಡಿ :– 14)** ಇಲಾಖೆಯಲ್ಲಿ ಸಾರ್ವಜನಿಕರಿಗೆ ಮಾಹಿತಿ ಪಡೆಯಲು ಲಭ್ಯವಿರುವ ಸೌವಲತ್ತುಗಳು ಹಾಗೂ ಗ್ರಂಥಾಲಯ ಅಥವಾ ವಾಚಾನಾಲಯಗಳು ಇದ್ದಲ್ಲಿ ಅದರ ವಿವರ.

ಕಾರ್ಯನಿರ್ವಾಹಕ ಇಂಜಿನೀಯರ್, ಪಂ.ರಾ.ಇಂ. ವಿಭಾಗ, ಕೊಪ್ಪಳ ವಿಭಾಗದ ವ್ಯಾಪ್ತಿಯಲ್ಲಿ ಲಭ್ಯವಿರುವ ಸೌವಲತ್ತುಗಳನ್ನು ಪಡೆಯಲು ಶ್ರೀ.ಎಸ್.ಕೆ.ಪಾಟೀಲ್, ಕಾರ್ಯನಿರ್ವಾಹಕ ಇಂಜಿನೀಯರ್, ಪಂ.ರಾ.ಇಂ. ವಿಭಾಗ,ಕೊಪ್ಪಳ ಇವರಿಗೆ ಅರ್ಜಿ ನೀಡಬೇಕು ಅಥವಾ ಸಂಪರ್ಕಿಸಬೇಕು.

ಕಚೇರಿಯ ಸಮಯದ ವೇಳೆಯಲ್ಲಿ ಮೇಲ್ಕಂಡ ಅಧಿಕಾರಿಗಳ ದೂರವಾಣಿ ಸಂಖ್ಯೆ:08539 220845 ಸಾರ್ವಜನಿಕರಿಗೆ ಬಳಕೆಗೆ ವಾಚನಾಲಯ ಲಭ್ಯವಿರುವುದಿಲ್ಲ.

**ಕೈಪಿಡಿ :– 15)** ಇಲಾಖೆಯಲ್ಲಿ ಸಾರ್ವಜನಿಕರಿಗೆ ಮಾಹಿತಿ ಅಧಿಕಾರಿಗಳ ಹೆಸರು, ಪದನಾಮ ಮತ್ತು ವಿವರಗಳು ಸಾರ್ವಜನಿಕ ಮಾಹಿತಿ ಅಧಿಕಾರಿಗಳು ಹೆಸರು ಪದನಾಮ.

ಕಾರ್ಯನಿರ್ವಾಹಕ ಇಂಜಿನೀಯರ್, ಪಂ.ರಾ.ಇಂ. ವಿಭಾಗ, ಕೊಪ್ಪಳ ಇವರ ವ್ಯಾಪ್ತಿಯಲ್ಲಿ ಲಭ್ಯವಿರುವ ಸೌವಲತ್ತುಗಳನ್ನು ಪಡೆಯಲು ಶ್ರೀ ಎಸ್.ಕೆ.ಪಾಟೀಲ್, ಕಾರ್ಯನಿರ್ವಾಹಕ ಇಂಜಿನೀಯರ್, ಇವರಿಗೆ ಅರ್ಜಿ ನೀಡುವುದು, ಅಥವಾ ಕಚೇರಿ ವೇಳೆಯಲ್ಲಿ ಸಂಪರ್ಕಿಸಬೇಕು.

**ಕೈಪಿಡಿ :– 16)** ಇತರ ವಿವರಗಳು

ಯಾವುವೂ ಇರುವುದಿಲ್ಲ.

ಮಾಹಿತಿಯನ್ನು ನಿಯಮದಡಿ ಪರಿಶೀಲಿಸಿ ವರದಿಯನ್ನು ತಯಾರಿಸಿ ಸಲ್ಲಿಸಲಾಗಿದೆ.

**ಶ್ರೀ ಎಸ್.ಕೆ. ಪಾಟೀಲ್,**
ಕಾರ್ಯನಿರ್ವಾಹಕ ಇಂಜಿನೀಯರ್,
ಪಂಚಾಯತ್ ರಾಜ್ ಇಂಜಿನೀಯರಿಂಗ್ ವಿಭಾಗ ಕೊಪ್ಪಳ.

**2006–07 ದಿಂದ 2009–10 ನೇ ಸಾಲಿನ ವರೆಗೆ ಬಿಡುಗಡೆಯಾದ ಅನುದಾನ ಮತ್ತು ವೆಚ್ಚದ ವಿವರ**

(ರೂ. ಲಕ್ಷಗಳಲ್ಲಿ)

| ಕ್ರ. ಸಂ. | ಲೆಕ್ಕ ಶೀರ್ಷಿಕೆ | 2006–07 | | 2007–08 | | 2008–09 | | 2009–10 | |
|---|---|---|---|---|---|---|---|---|---|
| | | ಬಿಡುಗಡೆಯಾದ ಅನುದಾನ | ವೆಚ್ಚ | ಬಿಡುಗಡೆಯಾದ ಅನುದಾನ | ವೆಚ್ಚ | ಬಿಡುಗಡೆಯಾದ ಅನುದಾನ | ವೆಚ್ಚ | ಬಿಡುಗಡೆಯಾದ ಅನುದಾನ | ವೆಚ್ಚ |
| 1. | 4215–01–102–9–01 ರಾಜ್ಯ ವಲಯ | 367.73 | 375.19 | 889.04 | 887.39 | 659.15 | 656.15 | 290.00 | 290.00 |
| 2. | 4215–01–102–9–01–132 World Bank | 90.00 | 45.15 | | | | | | |
| 3. | 4215–01–102–9–01 ರಾಜ್ಯ ವಲಯ ಶಾಸಕರ ಕಾರ್ಯಪಡೆ | | | | | | | 80.00 | 80.00 |
| 4. | 4215–01–102–9–01 ರಾಜ್ಯ ವಲಯ ಸಬಮಿಷನ್ | | | 332.50 | 0.00 | 667.50 | 667.50 | 467.83 | 467.83 |
| 5. | 4215–01–102–9–04 ಕೇಂದ್ರ ವಲಯ | 468.38 | 341.67 | 640.350 | 640.350 | 1036.03 | 1036.03 | 71.06 | 71.06 |
| 6. | 4215–01–102–9–04 Caretakar | | | | | 12.97 | 12.97 | | |
| 7. | 4215–01–102–9–04 ಕೇಂದ್ರ ವಲಯ ಶಾಸಕರ ಕಾರ್ಯಪಡೆ | | | | | | | 75.00 | 75.00 |
| 8. | 4215–01–102–9–04 ಕೇಂದ್ರ ವಲಯ ಶಾಲೆಗೆ ಕು.ನೀ.ಸ.ಯೋಜನೆ | | | | | | | 10.79 | 10.79 |
| 9. | 4215–01–102–9–04 ಡಿ. ಡಿ. ಪಿ. ಯೋಜನೆ | 329.59 | 318.04 | 458.69 | 458.69 | 279.00 | 279.00 | 328.70 | 328.70 |
| 10. | 4215–01–102–9–04 ಕೇಂದ್ರ ವಲಯ ಸಬಮಿಷನ್ | 98.75 | 0.00 | 1461.07 | 14.86 | 3072.21 | 2709.56 | 1408.73 | 1408.73 |
| 11. | 4215–01–102–9–04 | | | 5.75 | 4.10 | | | | |
| 12. | 4215–01–102–9–06–133 ಡಾ: ನಂಜುಂಡಪ್ಪ ವರದಿ | | | | | 139.00 | 139.00 | 41.57 | 41.57 |
| 13. | 4215–01–102–9–06–422 ರಾಜ್ಯ ವಲಯ ಸಬಮಿಷನ್ | | | | | | | 160.00 | 160.00 |

| ಕ್ರ. ಸಂ. | ಲೆಕ್ಕ ಶೀರ್ಷಿಕೆ | 2006–07 | | 2007–08 | | 2008–09 | | 2009–10 | |
|---|---|---|---|---|---|---|---|---|---|
| | | ಬಿಡುಗಡೆಯಾದ ಅನುದಾನ | ವೆಚ್ಚ | ಬಿಡುಗಡೆಯಾದ ಅನುದಾನ | ವೆಚ್ಚ | ಬಿಡುಗಡೆಯಾದ ಅನುದಾನ | ವೆಚ್ಚ | ಬಿಡುಗಡೆಯಾದ ಅನುದಾನ | ವೆಚ್ಚ |
| 14. | 4215–02–800–0–02–132 ಸುವರ್ಣ ಗ್ರಾಮ ಯೋಜನೆ | | | 300.00 | 200.00 | 749.00 | 749.00 | 200.00 | 200.00 |
| 15. | 5054–04–800–3–03 ರಸ್ತೆಗಳು | | | | | 757.18 | 754.64 | 596.64 | 596.64 |
| 16. | 5054–04–337–7–01 ಸೇತುವೆಗಳು | 54.29 | 52.92 | 72.64 | 71.27 | 199.09 | 199.09 | 38.26 | 38.26 |
| 17. | 5054–04–337–7–02 ಸೇತುವೆಗಳು | 39.47 | 22.92 | 35.64 | 19.08 | 16.56 | 16.56 | 180.00 | 180.00 |
| 18. | 3054–80–196–1–02 ಸಿ. ಎಂ. ಜಿ. ಎಸ್. ವೈ. ಯೋಜನೆ | 542.06 | 530.95 | 485.86 | 474.97 | 654.44 | 654.44 | 270.00 | 270.00 |
| 19. | 3054–80–196–1–03 ಸಿ. ಎಂ. ಜಿ. ಎಸ್. ವೈ. ಯೋಜನೇತರ | | | | | 6.44 | 6.44 | | |
| 20. | 3054–04–337–1–79 12ನೇ ಹಣಕಾಸು ರಸ್ತೆ | 158.65 | 158.65 | 178.65 | 178.65 | 364.96 | 364.96 | 297.00 | 297.00 |
| 21. | 3054–04–337–2–02 ನಬಾರ್ಡ ರಸ್ತೆ | | | 46.70 | 46.70 | | | | |
| 22. | 2215–01–052–0–02 ರಿಗ್ ನಿರ್ವಹಣೆ | 2.90 | 2.90 | | | | | | |
| 23. | 2215–01–102–1–08 ಯೋಜನೆ | 1.00 | 1.00 | | | | | | |
| 24. | 2215–01–102–1–08 ಕೇರ ಟೇಕರ ತರಬೇತಿ | | | 4.00 | 4.00 | 1.05 | 1.05 | | |
| 25. | 2215–01–102–1–75 ಕೇರ ಟೇಕರ ತರಬೇತಿ | | | | | | | 1.00 | 1.00 |
| 26. | 2515–00–101–0–09 12ನೇ ಹಣಕಾಸು ಕಟ್ಟಡ ನಿರ್ಮಾಣ | | | 42.26 | 42.26 | 25.265 | 25.265 | 75.80 | 75.80 |
| 27. | 2515-00-101-0-07-NP ZP Grant Maintenance | | | | | 3.00 | 3.00 | | |

| ಕ್ರ. ಸಂ. | ಲೆಕ್ಕ ಶೀರ್ಷಿಕೆ | 2006–07 | | 2007–08 | | 2008–09 | | 2009–10 | |
|---|---|---|---|---|---|---|---|---|---|
| | | ಬಿಡುಗಡೆಯಾದ ಅನುದಾನ | ವೆಚ್ಚ | ಬಿಡುಗಡೆಯಾದ ಅನುದಾನ | ವೆಚ್ಚ | ಬಿಡುಗಡೆಯಾದ ಅನುದಾನ | ವೆಚ್ಚ | ಬಿಡುಗಡೆಯಾದ ಅನುದಾನ | ವೆಚ್ಚ |
| 28. | 2515–00–101–0–10 ಜಿ.ಪಂ. ಕಟ್ಟಡ | | | 10.00 | 10.00 | | | | |
| 29. | 2515–00–101–0–09 12th Finance Commission | 50.52 | 43.77 | | | | | | |
| 30. | 2059–80–053–0–01 ಎಂ.ಇ & ಆರ್. ಸಿ. | | | 7.37 | 7.37 | 22.30 | 22.30 | 23.19 | 23.19 |
| 31. | 2059–80–052–0–01 ಹೊಸ ಪೂರೈಕೆಗಳು | 2.73 | 2.73 | | | 2.98 | 2.98 | 3.10 | 3.10 |
| 32. | 2059–80–053–0–02 12ನೇ ಹಣಕಾಸು | 36.87 | 23.30 | | | | | | |
| 33. | 2059–80–053–0–02 ನಿರ್ವಹಣೆ | 21.41 | 21.41 | 16.078 | 16.078 | | | | |
| 34. | 2059–80–053–5–07 12ನೇ ಹಣಕಾಸು ಕಟ್ಟಡ ನಿರ್ವಹಣೆ | | | | | 37.46 | 37.46 | 46.62 | 46.62 |
| 35. | 4702–00–101–9–02 Restoration of old & Breached Tanks. | 3.92 | 2.18 | | | | | | |
| 36. | 4702–00–101–9–01 ಡಾ: ನಂಜುಂಡಪ್ಪ ವರದಿ (ಎಂ.ಐ. ಟ್ಯಾಂಕ) | 1.34 | 1.10 | | | 14.18 | 14.18 | 44.00 | 44.00 |
| 37. | 2210–01–110–1–21 ಕಟ್ಟಡ ನಿರ್ವಹಣೆ | | | 4.40 | 4.40 | | | | |
| 38. | 2210–06–001–1–05 ಆಯುರ್ವೇಧಿಕ ಕಟ್ಟಡ | 2.00 | 1.92 | | | | | | |
| 39. | 2210–03–110–0–06 RIDF Nabard Building | 186.00 | 35.55 | 126.00 | 126.00 | 38.73 | 38.73 | | |
| 40. | 2702–01–101–0–72 ವಾರ್ಷಿಕ ನಿರ್ವಹಣೆ | 12.97 | 12.97 | 13.63 | 13.63 | | | | |
| 41. | 2702–80–800–0–01 ಸರ್ವೆ | 1.05 | 1.05 | 1.11 | 1.11 | 1.15 | 1.15 | | |
| 42. | 2702–80–052–1–01 | 2.48 | 2.28 | | | 2.70 | 2.70 | | |

| ಕ್ರ. ಸಂ. | ಲೆಕ್ಕ ಶೀರ್ಷಿಕೆ | 2006–07 | | 2007–08 | | 2008–09 | | 2009–10 | |
|---|---|---|---|---|---|---|---|---|---|
| | | ಬಿಡುಗಡೆಯಾದ ಅನುದಾನ | ವೆಚ್ಚ | ಬಿಡುಗಡೆಯಾದ ಅನುದಾನ | ವೆಚ್ಚ | ಬಿಡುಗಡೆಯಾದ ಅನುದಾನ | ವೆಚ್ಚ | ಬಿಡುಗಡೆಯಾದ ಅನುದಾನ | ವೆಚ್ಚ |
| 43. | 2403–00–101–0–02 ಪಶು ವೈದ್ಯಕೀಯ ಕಟ್ಟಡ ನಿರ್ಮಾಣ | 6.70 | 6.70 | 34.90 | 4.75 | 43.90 | 32.06 | | |
| 44. | 2202 ನಬಾರ್ಡ ಪಿ. ಯು. ಕಾಲೇಜು ಕಟ್ಟಡಗಳು | 1.85 | 1.85 | 41.51 | 41.51 | 22.34 | 21.45 | 20.48 | 20.48 |
| 45. | 2202–02–800–1–10 ಶಿಕ್ಷಣ ಇಲಾಖೆ ಕಟ್ಟಡಗಳು | | | | | 3.00 | 3.00 | | |
| 46. | 3451–00–102–1–02 ಜಿ.ಪಂ. ಅಭಿವೃದ್ಧಿ | | | 1.50 | 1.50 | | | | |
| 47. | 4235–02–102–1–01 ಅಂಗನವಾಡಿ ಕಟ್ಟಡಗಳು 12ನೇ | | | | | 13.407 | 13.407 | 17.25 | 17.25 |
| 48. | 4235–02–102–1–02 ಅಂಗನವಾಡಿ ಕಟ್ಟಡಗಳು 13ನೇ | | | | | 172.50 | 172.50 | | |
| 49. | 2225-02-794-0-01 SCP/TSP | | | | | 19.00 | 19.00 | | |
| 50. | 2225–01–227–0–02 ವಿದ್ಯಾರ್ಥಿಗಳ ವಸತಿ ನಿಲಯ | 2.00 | 2.00 | | | | | | |
| 51. | 2405–00–101–0–72 ಮೀನುಗಾರಿಕೆ ಇಲಾಖೆ ಕಟ್ಟಡಗಳು | | | | | 1.00 | 1.00 | | |
| 52. | 2205–00–102–1–01 ಯುವಜನ ಸೇವೆ ಕ್ರೀಡಾ ಇಲಾಖೆ | | | | | 2.03 | 2.03 | | |
| 53. | 2401–00–119–6–71 ತೋಟಗಾರಿಕೆ ಇಲಾಖೆ ಕಟ್ಟಡಗಳು | 1.38 | 1.38 | | | | | | |
| 54. | 2202–01–053–0–01–132 ಶಿಕ್ಷಣ ಇಲಾಖೆ ಕಟ್ಟಡಗಳು | | | | | | | 19.82 | 19.82 |

**ಎಸ್.ಕೆ. ಪಾಟೀಲ್,**

ಪಿ.ಆರ್.435

ಕಾರ್ಯನಿರ್ವಾಹಕ ಇಂಜಿನೀಯರ್,

ಪಂಚಾಯತ್ ರಾಜ್ ಇಂಜಿನೀಯರಿಂಗ್ ವಿಭಾಗ ಕೊಪ್ಪಳ.

**ಸಹಾಯಕ ಕಾರ್ಯಪಾಲಕ ಇಂಜಿನಿಯರ್, ನಂ.7 ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಉಪವಿಭಾಗ, ಸೊರಬ**

**ನಮೂನೆ**

| | |
|---|---|
| ಸಚಿವಾಲಯ: | ಕರ್ನಾಟಕ ಸರ್ಕಾರ |
| ಇಲಾಖೆ : | ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ನಂ.7 ಉಪವಿಭಾಗ, ಸೊರಬ, ಶಿವಮೊಗ್ಗ ಜಿಲ್ಲೆ. |
| ಸಾರ್ವಜನಿಕ ಪ್ರಾಧಿಕಾರಿ: | ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದ), ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಕೆ.ಆರ್. ವೃತ್ತ, ಬೆಂಗಳೂರು–560001. |

| ಮೇಲ್ಮನವಿ ಪ್ರಾಧಿಕಾರಿ (ಹೆಸರು/ವಿಳಾಸ/ಫೋನ್ ಇತ್ಯಾದಿ) | ಸಾರ್ವಜನಿಕ ಮಾಹಿತಿ ಅಧಿಕಾರಿ (ಹೆಸರು/ವಿಳಾಸ/ಫೋನ್ ಇತ್ಯಾದಿ) | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ (ಹೆಸರು/ವಿಳಾಸ/ಫೋನ್ ಇತ್ಯಾದಿ) |
|---|---|---|
| ಶ್ರೀ ಬಿ. ಪ್ರಭಾಕರ್ ಶೆಟ್ಟಿ, ಕಾರ್ಯಪಾಲಕ ಇಂಜಿನಿಯರ್, ಲೋ.ಬಂ.& ಒ.ಜ.ಸಾ. ಇಲಾಖೆ, ಶಿವಮೊಗ್ಗ ವಿಭಾಗ, ಶಿವಮೊಗ್ಗ–577201 | ಶ್ರೀ ಎಸ್.ಡಿ. ವಿಶ್ವನಾಥ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಲೋ.ಬಂ.& ಒ.ಜ.ಸಾ. ಇಲಾಖೆ, ನಂ.7 ಉಪವಿಭಾಗ, ಸೊರಬ–577429 | ಶ್ರೀ ಅನೀಲ್ ಕುಮಾರ್, ಸಹಾಯಕ ಇಂಜಿನಿಯರ್, ಲೋ.ಬಂ.& ಒ.ಜ.ಸಾ. ಇಲಾಖೆ, ನಂ.7 ಉಪವಿಭಾಗ, ಸೊರಬ–577429 |
| ಫ್ಯಾಕ್ಸ್:08182–274942 | ಫ್ಯಾಕ್ಸ್: | ಫ್ಯಾಕ್ಸ್: |
| ಕಛೇರಿ ಫೋನ್:08182–274942 | ಕಛೇರಿ ಫೋನ್: 08184–272319 | ಕಛೇರಿ ಫೋನ್: 08184–272319 |
| ಇ–ಮೇಲ್:eesmg@kpwd.gov.in | ಇ–ಮೇಲ್:aeesrb@kpwd.gov.in | ಇ–ಮೇಲ್:aeesrb@kpwd.gov.in |

ಸಹಾಯಕ ಕಾರ್ಯಪಾಲಕ ಇಂಜಿನಿಯರ್,
ನಂ.7 ಲೋ.ಬಂ. ಮತ್ತು ಒ.ಜ.ಸಾ. ಇಲಾಖೆ,
ಉಪವಿಭಾಗ, ಸೊರಬ.

**Assistant Executive Engineer, No.7 PW P & IWTD, Sub-Division, Soraba-577429**

**FORMAT**

| | |
|---|---|
| Secretariat | Govt of Karnataka |
| Department | Public Works Department |
| Sub unit | Assistant Executive Engineer, PW Port & IWT Department, No.7 Sub-Division, Soraba, Shimoga District. |
| Public Authority | The Chief Engineer, C & B (South), PW P & IWTD, KR Circle, Bangalore-01. |

| Applellate Authority (Name/Address/Phone etc.,) | Public Information Officer (Name/Address/Phone etc.,) | Assistant Public Information Officer (Name/Address/Phone etc.,) |
|---|---|---|
| Sri B. Prabhakara Shetty Executive Engineer, PW P & IWTD, Shimoga Division, Shimoga-577201 PW P & IWTD. | Sri S.D. Vishwanatha, Assistant Executive Engineer, No.7 PW P & IWTD, Sub-Division, Soraba-577429 | Sri Anil Kumar Assistant Engineer, No.7 PW P & IWTD, Sub-Division, Soraba-577429 |
| Fax: 08182-274942 | Fax: 08184-272319 | Fax: 08184-272319 |
| E-Mail:eesmg@kpwd.gov.in | E-Mail:aeesrb@kpwd.gov.in | E-Mail:aeesrb@kpwd.gov.in |

Assistant Executive Engineer,
No.7 PW P & IWTD, Sub-Division, Soraba-577429

PR-264

**ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ, ಬೆಂಗಳೂರು ಇವರ ನಡಾವಳಿಗಳು**

**ವಿಷಯ:** ಶ್ರೀಮತಿ ರತ್ನಮ್ಮ, ಬೆರಳಚ್ಚುಗಾರರು, ಕೈ.ತ.ಸಂಸ್ಥೆ, ಕನಕಪುರ ಇವರನ್ನು ಸರ್ಕಾರಿ ಸೇವೆಯಿಂದ ವಜಾ ಮಾಡುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯ ಆದೇಶ ಸಂಖ್ಯೆ: ಉತಇ/ತ/ಆ–5/ವಿವ–160/02–03 ದಿನಾಂಕ:27.03.2003.

2) ಈ ಕಛೇರಿಯ ಷೋಕಾಸ್ ನೋಟೀಸ್ ದಿನಾಂಕ:18.08.2009, 12.10.2009.

3) ಪತ್ರಿಕಾ ಪ್ರಕಟಣೆ ದಿನಾಂಕ:21.12.2009.

4) ಪ್ರಾಚಾರ್ಯರು, ಕೈ.ತ.ಸಂಸ್ಥೆ, ಕನಕಪುರ ಇವರ ಪತ್ರ ಸಂಖ್ಯೆ: ಕೈತಸಂ/ಕಪು/ಆಡಳಿತ/ಇತರೆ/ವಿನೋ–02/09–10, ದಿನಾಂಕ:23.01.2010.

5) ಪ್ರಾಚಾರ್ಯರು, ಕೈ.ತ.ಸಂಸ್ಥೆ(ಮ) ಹೊಸೂರು ರಸ್ತೆ, ಬೆಂಗಳೂರು–29 ಇವರ ಪತ್ರ ಸಂ:ಸಕೈತಸಂ/ಮ/ಬೆಂ29/ವಿವ–ಇತರೆ/09–10 ದಿನಾಂಕ:01.02.2010.

ಶ್ರೀಮತಿ ರತ್ನಮ್ಮ, ಬೆರಳಚ್ಚುಗಾರರು, ಕೈಗಾರಿಕಾ ತರಬೇತಿ ಸಂಸ್ಥೆ, ಕನಕಪುರ ಇವರು ಪ್ರಾಚಾರ್ಯರ ಸಹಿಯನ್ನು ಪೋರ್ಜರಿ ಮಾಡಿ ಸುಳ್ಳು ದಾಖಲೆ ಸೃಷ್ಟಿಸಿ ಸಾಲ ಪಡೆದಿರುವ ಹಾಗೂ ಕರ್ತವ್ಯಕ್ಕೆ ಗೈರುಹಾಜರಾಗಿರುವ ಸಂಬಂಧ ಉಲ್ಲೇಖ–1ರ ಆದೇಶದಂತೆ ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು. ನೌಕರರು ಅಂದಿನಿಂದ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗುತ್ತಿದ್ದು, ಉಲ್ಲೇಖ–2 ರಂತೆ ನೌಕರರಿಗೆ ಈ ಕಛೇರಿಯಿಂದ ಷೋಕಾಸ್ ನೋಟೀಸ್ ಜಾರಿಗೊಳಿಸಲಾಗಿತ್ತು. ಹಾಗೂ ನೌಕರರ ಗೈರುಹಾಜರಿಗೆ ಸೂಕ್ತ ವಿವರಣೆ ಕೇಳಲಾಗಿತ್ತು. ಹಾಗೂ ಲಿಖಿತ ಹೇಳಿಕೆ ಸಲ್ಲಿಸಲು ಅವಕಾಶ ನೀಡಲಾಗಿತ್ತು. ನೌಕರರಿಗೆ ಹೊರಡಿಸಿದ ನೋಟೀಸ್‌ಗಳು ಜಾರಿಯಾಗಿದ್ದರೂ, ನೌಕರರು ಯಾವುದೇ ರೀತಿಯ ಲಿಖಿತ ವಿವರಣೆ ಸಲ್ಲಿಸಿರುವುದಿಲ್ಲ. ಹಾಗೂ ಕರ್ತವ್ಯಕ್ಕೆ ಹಾಜರಾಗದೆ ಗೈರುಹಾಜರಿಯನ್ನು ಮುಂದುವರೆಸಿರುತ್ತಾರೆ. ಆದ್ದರಿಂದ ನೌಕರರಿಗೆ ಅಂತಿಮವಾಗಿ ಕರ್ತವ್ಯಕ್ಕೆ ಹಾಜರಾಗಲು ಅವಕಾಶ ನೀಡುವ ಸಂಬಂಧ ದೈನಂದಿನ ಪತ್ರಿಕೆಗಳಲ್ಲಿ ಪತ್ರಿಕಾ ಪ್ರಕಟಣೆ ಹೊರಡಿಸಲಾಗಿತ್ತು. ನೌಕರರು ಯಾವುದಕ್ಕೂ ಪ್ರತಿಕ್ರಿಯಿಸದೆ ಯಾವುದೇ ವಿವರಣೆ ಸಲ್ಲಿಸದೆ ಗೈರುಹಾಜರಿಯನ್ನು ಮುಂದುವರೆಸಿರುವುದನ್ನು ಗಂಭೀರವಾಗಿ ಪರಿಗಣಿಸಲಾಗಿರುತ್ತದೆ. ಸದರಿಯವರ ವರ್ತನೆಯು ಅಶಿಸ್ತಿನಿಂದ ಕೂಡಿದ್ದು, ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಗಳು 1957ರ ಪ್ರಕಾರ ಶಿಸ್ತು ಕ್ರಮಕ್ಕೆ ಬಾಧ್ಯಸ್ಥರಾಗಿರುತ್ತಾರೆ.

ಶ್ರೀಮತಿ ರತ್ನಮ್ಮ, ಬೆರಳಚ್ಚುಗಾರರು, ಕೈಗಾರಿಕಾ ತರಬೇತಿ ಸಂಸ್ಥೆ, ಕನಕಪುರ ಇವರು ದಿನಾಂಕ:02.11.2002 ಅನಧಿಕೃತವಾಗಿ ಗೈರುಹಾಜರಾಗಿರುವುದರಿಂದ, ಇವರ ಗೈರುಹಾಜರಿಯ ಅವಧಿ 4 ತಿಂಗಳು ಮೀರಿರುವುದರಿಂದ ಉಲ್ಲೇಖ (2)ರ ನೋಟೀಸಿನಲ್ಲಿ ಸದರಿ ನೌಕರರಿಗೆ ಅಂತಿಮ ಅವಕಾಶ ನೀಡಲಾಗಿದ್ದು, ಅವರಿಂದ ಯಾವುದೇ ಉತ್ತರ ಬಂದಿರುವುದಿಲ್ಲ. ಈ ಬಗ್ಗೆ ಪತ್ರಿಕಾ ಪ್ರಕಟಣೆ ಸಹ ಹೊರಡಿಸಲಾಗಿದ್ದು, ಇದರ ನಂತರವೂ ಸದರಿಯವರು ಸೇವೆಗೆ ಹಾಜರಾಗಿರುವುದಿಲ್ಲ ಎಂದು ಪ್ರಾಚಾರ್ಯರು, ಕೈಗಾರಿಕಾ ತರಬೇತಿ ಸಂಸ್ಥೆ, ಕನಕಪುರ ಮತ್ತು (ಮ), ಹೊಸೂರು ರಸ್ತೆ, ಬೆಂಗಳೂರು–29 ಇವರು ಉಲ್ಲೇಖ–4 ಮತ್ತು ಉಲ್ಲೇಖ–5 ರಲ್ಲಿ ತಿಳಿಸಿರುತ್ತಾರೆ. ಆದ್ದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ – 108ರ ಅನ್ವಯ ಸರ್ಕಾರಿ ನೌಕರನು ನಿಗದಿಪಡಿಸಿರುವ ಅವಧಿಗೂ ಹೆಚ್ಚಿಗೆ ಅನಧಿಕೃತವಾಗಿ ಗೈರುಹಾಜರಾಗಿರುವ ನೌಕರರನ್ನು ಸೇವೆಯಿಂದ ವಜಾ ಮಾಡಬಹುದಾಗಿದೆ.

ಮೇಲಿನ ಹಿನ್ನೆಲೆಯಲ್ಲಿ ಸದರಿ ನೌಕರರು ದೀರ್ಘ ಕಾಲದಿಂದ ಗೈರುಹಾಜರಾಗುತ್ತಿದ್ದು, ತಲೆಮರೆಸಿಕೊಂಡಿರುವುದಾಗಿಯೂ, ಕಾಣೆಯಾಗಿರುವುದಾಗಿಯೂ ಪರಿಗಣಿಸಿ, ಮೇಲ್ಕಂಡ ಎಲ್ಲಾ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿದಾಗ, ಶ್ರೀಮತಿ ರತ್ನಮ್ಮ, ಬೆರಳಚ್ಚುಗಾರರು, ಕೈಗಾರಿಕಾ ತರಬೇತಿ ಸಂಸ್ಥೆ, ಕನಕಪುರ ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957 ರಂತೆ ಶಿಸ್ತು ಕ್ರಮ ಜರುಗಿಸುವುದು ಅನಿವಾರ್ಯವಾಗಿರುತ್ತದೆ.

**ಆದೇಶ**

**ಸಂಖ್ಯೆ: ಉತಇ/ತರಬೇತಿ/ಆಡಳಿತ–5/ವಿವ–09/09–10, ದಿನಾಂಕ:8ನೇ ಫೆಬ್ರವರಿ, 2010**

ಪೀಠಿಕೆಯಲ್ಲಿ ಪ್ರಸ್ತಾಪಿತವಾಗಿರುವ ಅಂಶಗಳನ್ನಾಧರಿಸಿ, ಶ್ರೀಮತಿ ರತ್ನಮ್ಮ, ಬೆರಳಚ್ಚುಗಾರರು, ಕೈಗಾರಿಕಾ ತರಬೇತಿ ಸಂಸ್ಥೆ, ಕನಕಪುರ ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ–1958ರ ನಿಯಮ–108 ನ್ನು ಹಾಗೂ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ–14 (ii) ರಲ್ಲಿನ

